K. S. Anantha Krishna

ನಾಗವರ್ಮ ವಿರಚಿತ

# ಶಬ್ದಸ್ಮೃತಿ

* * *



ಸಮಾಜ ಪುಸ್ತಕಾಲಯ, ಧಾರವಾಡ

ನಾಗವರ್ಮ

# ಶಬ್ದಸ್ಮೃತಿ

[ ಕನ್ನಡದ ಪ್ರಾಚೀನ ವ್ಯಾಕರಣಗ್ರಂಥ ]



ಸಮಾಜ ಪುಸ್ತಕಾಲಯ ಧಾರವಾಡ-೧

ಪ್ರಕಾಶಕರು:
ಮನೋಹರ ಘಾಣೇಕರ, ಬಿ.ಎ., ಬಿ. ಕಾಂ.
ಸಮಾಜ ಪುಸ್ತಕಾಲಯ, ಧಾರವಾಡ—೧

ಪ್ರಥಮ ಮುದ್ರಣ : ೧೯೬೯

ಬೆಲೆ : ರೂ. ೨—೨೫

ಮುದ್ರಕರು :
ರವೀಂದ್ರ ಘಾಣೇಕರ, ಎಲ್. ಪಿ. ಟಿ.
ಪ್ರತಿಭಾ ಮುದ್ರಣ, ಧಾರವಾಡ—೧.

K-S. Anantha krishna

# ಪ್ರಸ್ತಾವನೆ

ಯಾವುದಾದರೊಂದು ಜನದ ಮಾತು ಸಾಹಿತ್ಯ ಪದವಿಗೆ ಏರಲು ಮೂರು ಕಾರಣಗಳ ಅಗತ್ಯವಿದೆಯೆಂದು ಶ್ರೀ ಬೇಂದ್ರೆ ಅವರು ಹೇಳಿದ್ದಾರೆ. ಆ ಕಾರಣಗಳು ಯಾವವೆಂದರೆ ೧) ಶ್ರವಣಪ್ರಿಯ ಬಹುಜನಸಮಾಜ. ೨. ಪ್ರತಿಷ್ಠಾಪ್ರಿಯ ವಿದ್ವಾನ್ ಪಂಡಿತ ವರ್ಗ. ೩. ಕೀರ್ತಿಪ್ರಿಯರಾದ ಆಶ್ರಯಶೀಲರಾಜರು. ಇವುಗಳಲ್ಲಿ ಎರಡು ಕಾರಣಗಳು ಅನುಕೂಲವಿದ್ದರೆ ಮೂರನೆಯ ಕಾರಣವು ಅನುಕೂಲವಾಗುತ್ತ ಹೋಗುತ್ತದೆ. ಈ ತ್ರಿಕೂಟಕ್ಕೆ ಸಂಮತವಾದ ಭಾಷೆ ವಾಙ್ಮಯದಲ್ಲಿಳಿದು ಇತಿಹಾಸದಲ್ಲಿ ಸ್ಥಾನವನ್ನು ಪಡೆಯುತ್ತದೆ. ಆದರೆ ಆ ಮೂರನೆಯ ಕಾರಣವು ಅತಿ ಬಲಿಷ್ಠವಾಗಿದ್ದರೆ ಅದು ಅನುಕೂಲವಾಗುವದು ಕಠಿಣವಾಗಿ ಇಷ್ಟಪರಿಣಾಮಕ್ಕೆ ಕಾಲಾವಧಿ ಹಿಡಿಯುತ್ತದೆ. ಎರಡು ಕಾರಣಗಳು ಒಕ್ಕಟ್ಟಾದರೆ ಮಾತ್ರ ಗೆಲುವು ದೊರೆಯಲೇಬೇಕು. ಬಹುಜನದ ಭಾಷೆ ಪಂಡಿತರಿಗೆ ಮಾನ್ಯವಾದರೆ ರಾಜಾಶ್ರಯ ದೊರಕಿಸುವದು ಕಠಿಣವಾಗಲಾರದು. ಪಾಲಿ ಮತ್ತು ಅರ್ಧಮಾಗಧಿಗಳ ಇತಿಹಾಸವು ಇದನ್ನೇ ಹೇಳುತ್ತದೆ. ಪಂಡಿತರು, ರಾಜರು ಒಂದಾದರೆ ಬಹುಜನ ಸಮಾಜವನ್ನು ಒಲಿಸಿಕೊಳ್ಳಬಹುದು. ಉರ್ದು ಮತ್ತು ಇಂಗ್ಲೀಷ್ ಭಾಷೆಗಳ ಇತಿಹಾಸವು ಇದನ್ನು ಹೇಳುತ್ತದೆ. ರಾಜರು, ಬಹುಜನ ಸಮಾಜವು ಒಂದುಗೂಡಿದರೆ ಪಂಡಿತರನ್ನು ಮಣಿಸಬಹುದು. ಅಪಭ್ರಂಶ ಮತ್ತು ದೇಶೀಯ ಭಾಷೆಗಳ ಇತಿಹಾಸವು ಈ ತತ್ವವನ್ನು ಸಾರುತ್ತದೆ. ಕರ್ನಾಟಕದಲ್ಲಿ ರಾಜರು ಮತ್ತು ಬಹುಜನ ಸಮಾಜ ಇವರ ಒಕ್ಕಟ್ಟಿನಿಂದ ಪಂಡಿತವರ್ಗವು ಸಂಸ್ಕೃತ, ಪ್ರಾಕೃತ, ಅಪಭ್ರಂಶಗಳ ವ್ಯೂಹದಿಂದ ಬೇಗನೇ ಹೊರಬಿದ್ದಿತೆಂದು ದೇಶೀಯ ಭಾಷೆಗಳಿಗೆ ಭಾಗ್ಯದ ದಿವಸವು ಬೇಗ ಬಂದಿತು. ದೇಶೀಯ ಭಾಷೆಗಳ ವಿಜಯವೆಂದರೆ ಬಹುಜನ ಸಮಾಜದ

ವಿಜಯ. ಆದರೆ ಈ ವಿಜಯವು ದೊರಕಬೇಕಾದರೆ ಅನೇಕ ಯುದ್ಧಗಳಾದವು.

ಇಂದು ನಮಗೆ ಅವಗತವಿದ್ದ ಕನ್ನಡ ಸಾಹಿತ್ಯದ ಇತಿಹಾಸ-ಅದರ ಪ್ರಾಚೀನತೆಯನ್ನು ಲಭ್ಯಗ್ರಂಥಗಳ-ಶಾಸನಗಳ ಆಧಾರದ ಮೇಲಿನಿಂದ ೮-೯ ನೇ ಶತಮಾನದ ವರೆಗೂ ಒಯ್ಯಲಡ್ಡಿಯಿಲ್ಲ. ಈ ಅವಧಿಯಲ್ಲಿ ರಚಿತವಾದ ಗ್ರಂಥಗಳ ಅವಲೋಕನೆಯಿಂದ ಅವುಗಳಲ್ಲಿ ಹೆಸರಿಸಲಾದ ಪೂರ್ವಸೂರಿಗಳ ಕೃತಿಗಳನ್ನು ಮತ್ತೂ ಒಂದೆರಡು ಶತಮಾನಗಳಷ್ಟು ಹಿಂದೆ ಚಾಚಲು ಆಧಾರವಿದೆ. ಆದಿಪಂಪ-ಅಭಿನವ ಪಂಪ-ಅಗ್ಗಳ ಮೊದಲಾದವರಿಂದ ಸ್ತುತ್ಯರಾದ ಮೂವರು ಜೈನ ಕವಿಗಳು ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದರು, ಅನುಕ್ರಮವಾಗಿ ಸು. ೪೦೦-೫೫೦-೬೦೦ ರ ಅವಧಿಯಲ್ಲಿ ಇದ್ದವರು. ಜೈನರಲ್ಲಿ, ಹಾಗೆಯೇ ಕನ್ನಡದಲ್ಲಿ ಉದ್ದಾಮರಾದ ಕವಿಗಳಿಂದ ಸ್ತುತ್ಯರಾದ ಇವರೂ ಮಹಾನ್ ಕವಿಗಳೇ ಆಗಿರಬೇಕು. ಆದರೆ ದುರ್ದೈವದಿಂದ ಇವರಿಂದ ರಚಿತವಾದ ಯಾವ ಕೃತಿಗಳೂ ಇಂದು ಉಪಲಬ್ಧವಿಲ್ಲ. ಇವರ ಪರಿಚಯವಾಗುವುದು ಅನ್ಯರ ಕೃತಿಗಳ ಮೂಲಕ.

ಕರ್ನಾಟಕಕ್ಕೆ ಜೈನರು ಆಗಮಿಸುವ ಪೂರ್ವದಲ್ಲಿ ಇಲ್ಲಿಯ ಜನತೆಯ ಭಾಷೆಯ-ಸಾಹಿತ್ಯದ ಪರಿಸ್ಥಿತಿ ಏನಿತ್ತೆಂಬುದು ಖಚಿತವಾಗಿ ಹೇಳಬರುವಂತಿಲ್ಲ. ತೀರ ಪ್ರಾಚೀನವೆಂದು ಪರಿಗಣಿತವಾದ ಹಲ್ಮಿಡಿಯ ಶಾಸನದ ಕಾಲವನ್ನು ದಿ. ಗೋವಿಂದ ಪೈಗಳವರು ಕ್ರಿ. ಶ. ೩೬೫-೩೮೩ ಎಂದು ಹೇಳಿ, ಹಲ್ಮಿಡಿಯ ಶಿಲಾಲೇಖದ ಕ್ರಿ. ಶ. ೫ ನೆಯ ಶತಕಕ್ಕೆ ಸಾಕಷ್ಟು ಹಿಂದಿನಿಂದಲೇ ಕನ್ನಡದಲ್ಲಿ ಸಂಸ್ಕೃತ ಮಿಶ್ರವಾದ (ಆತಏವ ಸಂಸ್ಕೃತ ಛಂದೋಬದ್ಧವಾದ) ಕನ್ನಡ ಸಾಹಿತ್ಯವು ಇದ್ದಿರಬೇಕು' ಎಂದು ಅನುಮಾನಿಸಿದ್ದಾರೆ. ಶಾಸನದ ಭಾಷೆ ಬಂಧಗಳನ್ನು ನೋಡಿದರೆ ಅವರ ಹೇಳಿಕೆಯಲ್ಲಿ ತಥ್ಯಾಂಶವಿದೆಯೆನ್ನಲು ಅಡ್ಡಿ ಇಲ್ಲ. ದಿವಂಗತ ಡಾ. ಎಂ. ಎಚ್. ಕೃಷ್ಣ ಅವರು ತಮ್ಮ 'ಅತ್ಯಂತ ಪ್ರಾಚೀನ ಕನ್ನಡ ಶಾಸನ' ಎಂಬ ಲೇಖನದಲ್ಲಿ ಹಲ್ಮಿಡಿಯ ಶಾಸನವನ್ನು ಅಭ್ಯಸಿಸಿ ಇಂತು ನಿರ್ಣಯಕ್ಕೆ ಬಂದಿದ್ದಾರೆ



೧. ಕನ್ನಡ-ಸಂಸ್ಕೃತ ಸಂಬಂಧ ಕ್ರಿ. ಶ. ೪೫೦ ಕ್ಕೆ ಬಹಳ ಹಿಂದೆಯೇ ಆರಂಭವಾಗಿ ಸಂಸ್ಕೃತ ಸಮಸ್ತ ಪದಗಳಿಂದ ಕೂಡಿದ ಪ್ರೌಢವಾದ ಕನ್ನಡವು ೫ ನೆಯ ಶಕದ ವೇಳೆಗೆ ಚೆನ್ನಾಗಿ ಬಳಕೆಗೆ ಬಂದಿತ್ತು. ೨. ಜನಬಳಕೆಯಲ್ಲಿ ಶುದ್ಧ ಕನ್ನಡ ಪದಗಳಿದ್ದರೂ ಪಂಡಿತರ ಬರವಣಿಗೆಯಲ್ಲಿ ಸಂಸ್ಕೃತ ಪ್ರಚುರವಾದ ಭಾಷೆಯಿತ್ತು. ೩. ಪೂರ್ವದ ಕನ್ನಡದ ಪದರೂಪಗಳು ವ್ಯಾಕರಣ ನಿಯಮಗಳಿಗೆ ಕಟ್ಟು ಬಿದ್ದು ಕನ್ನಡವು ಚೆನ್ನಾಗಿ ಬಲಿತ ಭಾಷೆಯಾಗಿತ್ತು. ೪. ಇದಕ್ಕೆ ಈ ಭಾಷೆಯೂ ಇದರ ವಾಙ್ಮಯವೂ ಕೆಲವು ಶತಮಾನಗಳ ಹಿಂದೆಯೇ ಬೆಳೆದು ಬದುಕಿ ಬಾಳಿರಬೇಕು.

ದಿ. ಡಾ. ಎಂ. ಎಚ್. ಕೃಷ್ಣ ಅವರ ನಿರ್ಣಯವನ್ನು ಕೂಲಂಕಷವಾಗಿ ಅಭ್ಯಸಿಸಿ, ಕನ್ನಡವು ಗ್ರಾಂಥಿಕ ಭಾಷೆಯಾಗಿ, ಸಂಸ್ಕೃತದಿಂದ ಪರಿಪುಷ್ಟಗೊಂಡು, ೧ ನೇ ಶತಮಾನದ ಹೊತ್ತಿಗೊ ಬೆಳೆಯುತ್ತ ನಡೆದ-ಅಥವಾ ಬೆಳೆದ ಭಾಷೆಯಾಗಿತ್ತೆಂದು ಅನುಮಾನಿಸಬಹುದು. ಆದರೆ ಈ ಬೆಳವಣಿಗೆಯನ್ನು ಗುರುತಿಸುವ ಯಾವ ಕೃತಿಗಳೂ ಸದ್ಯ ಉಪಲಬ್ಧವಿಲ್ಲ. ರಾಷ್ಟ್ರಕೂಟ ರಾಜನಾದ ನೃಪತುಂಗನು (೮೧೪-೮೭೭) ಕವಿರಾಜಮಾರ್ಗವೆಂಬ ತನ್ನ ಅಲಂಕಾರ ಗ್ರಂಥದಲ್ಲಿ, ತನಗಿಂತಲೂ ಪೂರ್ವದಲ್ಲಿದ್ದ ಕವಿಗಳನ್ನು ನೆನೆದಿದ್ದಾನೆ :—

ಮಿಗೆ ಕನ್ನಡ ಕಬ್ಬಂಗಳೊ । ಳಗಣಿತಗುಣಗದ್ಯಪದ್ಯ ಸಮ್ಮಿಶ್ರಿತಮಂ ।
ನಿಗದಿಸುವರ್ ಗದ್ಯ ಕಥಾ । ಪ್ರಗೀತಿಯಂ ತಚ್ಚಿರಂತನಾಚಾರ್ಯರ್ಕಳ್ ॥
ವಿಮಲೋದಯ ನಾಗಾರ್ಜುನ।ಸಮೇತ ಜಯಬಂಧುದುರ್ವಿನೀತಾದಿಗಳೀ ।
ಕ್ರಮದೊಳ್ ನೆಗಳ್ಚಿಗದ್ಯಾ।ಶ್ರಮಪದ ಗುರುತಾ ಪ್ರತೀತಿಯಂ ಕೆಯ್ಕೊಂಡರ್॥
ಪರಮ ಶ್ರೀ ವಿಜಯ ಕವೀ । ಶ್ವರಪಂಡಿತ ಚಂದ್ರಲೋಕಪಾಲಾದಿಗಳೀ ।
ನಿರತಿಶಯ ವಸ್ತು ವಿಸ್ತರ । ವಿರಚನೆ ಲಕ್ಷ್ಯಂ ತದಾದ್ಯ ಕಾವ್ಯಕ್ಕೆಂದುಂ ॥

ಇದನ್ನು ಮನದಂದರೆ ನೃಪತುಂಗನ ಪೂರ್ವದಲ್ಲಿಯೇ ಕನ್ನಡದಲ್ಲಿ ಗದ್ಯ-ಪದ್ಯಗ್ರಂಥಗಳು ರಚಿತವಾಗಿದ್ದವೆನ್ನುವದರಲ್ಲಿ ಯಾವ ಸಂಶಯವೂ ಇಲ್ಲ.

ಕವಿರಾಜಮಾರ್ಗದ ಕರ್ತೃವಿನ ಬಗ್ಗೆ ಅನೇಕಾನೇಕ ಊಹಾಪೋಹಗಳು ನಡೆದು ಯಾವ ನಿರ್ಣಯಕ್ಕೂ ಬಂದಂತಿಲ್ಲ. ರಾಷ್ಟ್ರಕೂಟ ರಾಜನಾದ ಅಮೋಘವರ್ಷ–ಅತಿಶಯಧವಳನೇ ಇದರ ಕರ್ತೃವೆಂದು ಒಂದು ಪಂಗಡದವರ ವಾದ. ಶ್ರೀ ವಿಜಯ ಕರ್ತೃವೆಂದು ಇನ್ನೊಂದು ಪಂಗಡದವರ ಪ್ರತಿವಾದ. ನೃಪತುಂಗನ ರಾಜ್ಯದಾಡಳತೆಯ ಕಾಲಾವಧಿಯನ್ನು ಅವನು ಎದುರಿಸಬೇಕಾದ ಸಮಸ್ಯೆಗಳನ್ನು ಮನದಂದರೆ, ನಿಶ್ಚಿಂತ ವಾತಾವರಣದಲ್ಲಿ ರಚಿಸಬಹುದಾದ ಅಲಂಕಾರ ಶಾಸ್ತ್ರದಂಥ ಗ್ರಂಥವನ್ನು ಅವನು ರಚಿಸಿರಲಾರನೆಂದೇ ಹೇಳಬೇಕಾಗುವದು. ಅಮೋಘವರ್ಷನು ಒಂದರ್ಥದಲ್ಲಿ ಭಾರತದ ಚಕ್ರಾಧಿಪತ್ಯವನ್ನು ಮಾಡಿದ ಅರಸು. ಮಹಾಪ್ರಬಲನಾಗಿದ್ದನೆಂತಲೇ ಜಿತರಾಜರನ್ನು ಅಂಕಿತದಲ್ಲಿರಿಸಿಕೊಂಡಿದ್ದ. ಆದರೆ ಅವರ ಉಪಟಳದಿಂದ ಹೊರತಾಗಿರಲಿಲ್ಲ. ರಾಜಪೀಠ ಶಲ್ಯಸಮವಾದಾಗ, ಅವನಿಗೆ ಇಂಥದೊಂದು ಕೃತಿಯನ್ನು ರಚಿಸಲು ಅವಕಾಶ ದೊರೆಯಿತೆನ್ನುವದು ಧಾರ್ಷ್ಟ್ಯದ ಮಾತಾಗುತ್ತದೆ. ಆದರೆ ಅಂದಿನ ಸಮಸ್ತ ರಾಜರಂತೆ ಅಮೋಘವರ್ಷನೂ ಆಶ್ರಯದಾತನಾಗಿದ್ದನಲ್ಲದೆ ಸ್ವಯಂ ಕವಿಯೂ ಪಂಡಿತನೂ ಆಗಿರುವ ಸಂಭವವಿದೆ. ಕಾರಣ ಪ್ರಶ್ನೋತ್ತರ ಮಾಲಿಕೆಯೆಂಬ ಸಂಸ್ಕೃತ ಗ್ರಂಥವನ್ನು ಅವನೇ ರಚಿಸಿರುವದಾಗಿ ತಿಳಿಯುತ್ತದೆ. ಆದರೆ ಕವಿರಾಜಮಾರ್ಗದಲ್ಲಿ, ನೃಪತುಂಗನೇ ಆ ಕೃತಿಯ ರಚಕನೆಂಬ ಬಗ್ಗೆ ಹೇಳಿರದೆ–"ನೃಪತುಂಗದೇವಾನುಮತಮಪ್ಪ ಕವಿರಾಜಮಾರ್ಗದೊಳ್" ಎಂದು ಹೇಳಿದ್ದನ್ನು ನೋಡಿದರೆ, ಶ್ರೀವಿಜಯನೆಂಬ ಆಸ್ಥಾನಕವಿ ಇದನ್ನು ರಚಿಸಿ ತನ್ನ ನೆಚ್ಚಿನ ಅರಸನ ಹೆಸರಿನಲ್ಲಿ ಪ್ರಸಿದ್ಧಪಡಿಸಿರಬೇಕೆಂದು ಅನುಮಾನ ಬಲವಾಗುತ್ತಿದೆ.

ಕವಿರಾಜಮಾರ್ಗದ ಕರ್ತೃತ್ವದ ಬಗ್ಗೆ ನಿರ್ಣಯವು ಎಂತಾದರೂ ಆಗಲಿ–ಆದರೆ ಕನ್ನಡದಲ್ಲಿಯ ಪ್ರಪ್ರಥಮ ಗ್ರಂಥವೆಂಬ ಅದರ ಅಮೋಘತೆಗೆ ಕುಂದು ಬರದು. ಅಂದರೆ ಅಲಂಕಾರ ಶಾಸ್ತ್ರದ ನಿಯಮಗಳು ನಿರ್ಮಿತಿಯಾಗುವ ಹೊತ್ತಿಗೆಂದರೆ, ಕನ್ನಡ ಸಾಹಿತ್ಯದ ಬೆಳವಣಿಗೆ ಅಪಾರವಾಗಿಯೇ



ಬೆಳೆದಿರಬೇಕು. ಅದಕ್ಕೆ ಕಾರಣಗಳೂ ಇಲ್ಲದೆ ಇಲ್ಲ.

ಬೌದ್ಧ–ಜೈನರು ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ, ಕ್ಷಾಮ ಕಾರಣವಾಗಿ ಗುಳೆಕಟ್ಟಿಕೊಂಡು ಬಂದ ನಂತರ, ಜೈನಗುರು ಭದ್ರಬಾಹು ಅವನ ಶಿಷ್ಯ ಮೌರ್ಯ ಚಂದ್ರಗುಪ್ತ ಶ್ರವಣಬೆಳಗೊಳದಲ್ಲಿ ದೇಹವಿಟ್ಟರೆಂದು ಜೈನಗ್ರಂಥಗಳಲ್ಲಿ ಹೇಳಿದೆ. ಬಂದ ಜೈನರು ಇದೇ ನಾಡಿನಲ್ಲಿ ಚಿರಸ್ಥಾಯಿಯಾದರು. ಧರ್ಮಪ್ರಚಾರ ಮಾಡಿದರು. ರಾಜ್ಯಗಳನ್ನು ಕಟ್ಟಿದರು. ಬಹುಜನ ಸಮಾಜಕ್ಕೆ ಜೈನಧರ್ಮದ ನೀತಿನಿಯಮಗಳು ಒಗ್ಗಡಿಸುವಂಥವಾದುವು. ಜೈನರಿಗೆ ಧರ್ಮ ಪ್ರಚಾರ ಮಾಡಲು ಪ್ರಾದೇಶಿಕ ಭಾಷೆಯನ್ನು ಆತ್ಮಸಾತ್ತಾಗಿ ಮಾಡಿಕೊಳ್ಳದೆ ಅನ್ಯ ಉಪಾಯವಿರಲಿಲ್ಲ. ಕನ್ನಡಂಗಳನ್ನು ಆಳುತ್ತಿದ್ದ ರಾಜರು ಜೈನಮತೀಯರಾಗಿಯೋ, ಅಥವಾ ಪರಧರ್ಮ ಸಹಿಷ್ಣುಗಳಾಗಿಯೋ ಇದ್ದುದರಿಂದ ಕನ್ನಡದಲ್ಲಿ ಜೈನಧರ್ಮಪರವಾದ ಸಾಹಿತ್ಯ ಹೇರಳವಾಗಿ ಬೆಳೆದು ಅಭಿವೃದ್ಧಿಸಲು ಅನುಕೂಲತೆ ಒದಗಿತು. ಸುಮಾರು ೮ ನೇ ಶತಮಾನದಿಂದ, ೧೨ ನೇ ಶತಮಾನದವರೆಗೆ ಅಂದರೆ ಅಖಂಡ ನಾಲ್ಕೈದು ನೂರು ವರುಷಗಳವರೆಗೆ ಜೈನ ಸಾಹಿತ್ಯ ಕನ್ನಡದಲ್ಲಿ ಬಹುವಿಜೃಂಭಣೆಯಿಂದ ಮೆರೆಯಿತೆನ್ನಲು ಅಡ್ಡಿ ಇಲ್ಲ. ಆದಿ ಶಂಕರಾಚಾರ್ಯರ ವೈದಿಕ ಧರ್ಮದ ಪುನರುತ್ಥಾನದಿಂದ ಜೈನಧರ್ಮಪ್ರಚಾರಕ್ಕೆ ಅಡ್ಡಿ–ಆತಂಕ ಒದಗಿದರೂ ಸಾಹಿತ್ಯ ನಿರ್ಮಿತಿ ಖಂಡವಾದಂತಿಲ್ಲ. ರಾಮಾನುಜರ ವಿಶಿಷ್ಟಾದ್ವೈತ ಹಾಗೂ ವೀರಶೈವರ ಪ್ರಾಬಲ್ಯದಿಂದ ಮಾತ್ರ ಜೈನಧರ್ಮದ ಅವಕಳೆಗೆ ಮೊದಲಾಯಿತು. ಮಾನವ ಸ್ವಭಾವದ ಒಲವು ನಿಲುವುಗಳ ಬಗೆಯೇ ವಿಚಿತ್ರವಾಗಿದೆ. ಅದು ಸದಾ ಬದಲಾವಣೆಯನ್ನು ಬಯಸುತ್ತಿದೆ. ಸಂತುಷ್ಟತೆ ಸಮಾಧಾನಗಳು ಅದಕ್ಕೆ ಅರಿತು ಗೊತ್ತಿರದ ವಿಷಯಗಳು. ಶಾಂಕರ–ರಾಮಾನುಜ-ಶೈವ ಮತದ ಪ್ರಚಾರ–ಪ್ರಸಾರಗಳು ಜೈನಧರ್ಮದ ಇಳಿಮುಖಕ್ಕೆ ಕಾರಣವಾದಷ್ಟೇ, ಜನತೆಯಲ್ಲಿಯ ಬದಲಾವಣೆಯ ಒಲವೂ ಬಲವೂ ಅಷ್ಟೇ ಕಾರಣವಾಗಿವೆ. ಇಂಥ ಉನ್ನತಿ–ಅವನತಿಯ ಅವಸ್ಥೆಯಿಂದ ಯಾವ ಧರ್ಮ, ಯಾವ ಸಾಹಿತ್ಯ, ಯಾವ ಸಂಸ್ಕೃತಿಯೂ ಪಾರಾಗಿಲ್ಲ. ಅದು ಕಾಲಮಹಿಮೆ–ಅಷ್ಟೇ !

ಅದೇನೇ ಇದ್ದರೂ, ಕನ್ನಡ ಸಾಹಿತ್ಯ ಸಂಸ್ಕೃತಿಯು ಮಟ್ಟಿಗೆ ಹೇಳುವದಾದರೆ, ಜೈನರಿಂದ ಅದು ತುಂಬ ಪರಿಪುಷ್ಟಗೊಂಡಿದೆ. ಮಹಾವಿಭವ ಸಂಪತ್ ಸಮೃದ್ಧಿಯನ್ನು ಪಡೆದಿದೆ. ಕನ್ನಡ ಸಾಹಿತ್ಯ ಸಂಸ್ಕೃತಿಗಳ ಇತಿಹಾಸದಲ್ಲಿ ಜೈನಕವಿಗಳ ಅವರಿಗೆ ಆಶ್ರಯದಾತರಾದ ರಾಜಮಹಾರಾಜರ ಸ್ಥಾನಮಾನಗಳಿಗೆ ಆಚಂದ್ರಾರ್ಕ ಚ್ಯುತಿ ಇಲ್ಲ. ಈ ಪ್ರಸ್ತಾವನೆಯ ಮೊದಲಿನಲ್ಲೇ ಉದ್ಧರಿಸಿದ ಶ್ರೀಬೇಂದ್ರೆಯವರ ವಿವರಣೆಯಂತೆ ಶ್ರವಣಪ್ರಿಯ ಬಹುಜನ ಸಮಾಜ-ಪ್ರತಿಷ್ಠಾಪ್ರಿಯ ವಿದ್ವಾನ್ ಪಂಡಿತ ವರ್ಗ ಹಾಗೂ ಕೀರ್ತಿಪ್ರಿಯರಾದ ಆಶ್ರಯಶೀಲ ರಾಜರು-ಈ ತ್ರಿಕೂಟದ ಹಾರ್ದಿಕ ಸಂಬಧವೇ, ಜೈನ ವಾಙ್ಮಯ ಕನ್ನಡದಲ್ಲಿ ಉಚ್ಛ್ರಾಯ ಸ್ಥಿತಿಗೇರಲು ಕಾರಣವಾಯಿತು. ಸಾಹಿತ್ಯದ ವಿವಿಧಾಂಗಗಳಾದ ಕಾವ್ಯ ವ್ಯಾಕರಣ ಛಂದಸ್ಸು-ಅಲಂಕಾರಗಳಿಗೆ ಜೈನ ಕವಿ ಕೃತ ಗ್ರಂಥಗಳೇ ಬುನಾದಿಗಳು. ಪಂಪ ಮಹಾಕವಿಯ ಸಮಸ್ತ ಭಾರತಸಾರವಾದ ವಿಕ್ರಮಾರ್ಜುನ ವಿಜಯವೇ ಆದಿಕಾವ್ಯ-ಅಮರ ಕಾವ್ಯ. ಹಾಗೆಯೇ, ಅಲಂಕಾರ ಶಾಸ್ತ್ರಕ್ಕೆ, ನೃಪತುಂಗ (ಶ್ರೀವಿಜಯ) ನ ಕವಿರಾಜಮಾರ್ಗ, ವ್ಯಾಕರಣಕ್ಕೆ ಎರಡನೇ ನಾಗವರ್ಮನ ಶಬ್ದಸ್ಮೃತಿ – (ಕಾವ್ಯಾವಲೋಕನ). ವಿಕ್ರಮಾರ್ಜುನ ವಿಜಯವು ಕನ್ನಡ ಸಾಹಿತ್ಯದ ಶಾಯಿಬೇರು. ನಿರಂತರ ಸ್ಫೂರ್ತಿಸ್ಥಾನ. ಕವಿರಾಜಮಾರ್ಗವು-ಕನ್ನಡದಲ್ಲಿ ಕಾವ್ಯರಚನೆ ಮಾಡಬೇಕೆನ್ನುವ ಕವಿಗಳಿಗಾಗಿ ಬರೆದ ಒಂದು ಕೈಪಿಡಿ. ( ದಿ. ತೀ. ನಂ. ಶ್ರೀ-ಭಾರತೀಯ ಕಾವ್ಯ ಮೀಮಾಂಸೆ) ನಂತರ ಬರುವದೇ ಕಾವ್ಯಾವಲೋಕನ.

ಕಾವ್ಯಾವಲೋಕನದ ಕರ್ತೃವಿನ ಬಗ್ಗೆ ಡಾ. ರಂ. ಶ್ರೀ ಮುಗಳಿ ಅವರು ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ "ವ್ಯುತ್ಪತ್ತಿ ಸಾಧಕವಾದ ಸಮಗ್ರ ಗ್ರಂಥಗಳನ್ನು ಕನ್ನಡಕ್ಕೆ ಒದಗಿಸಿದ ಅಪೂರ್ವ ಶ್ರೇಯಸ್ಸು ಇವನಿಗೆ ಸಲ್ಲುತ್ತದೆ. ಕವಿರಾಜಮಾರ್ಗಕಾರನು ಬರೀ ಅಲಂಕಾರ ಶಾಸ್ತ್ರಕ್ಕೆ, ೧ ನೇ ನಾಗವರ್ಮನು ಬರೀ ಛಂದಸ್ಸಿಗೆ ಆದ್ಯರಾಗಿ ಹೋದರು. ಆದರೆ ಕಾವ್ಯಾಂಗ ಪರವಾದ ಸಮಗ್ರ ಗ್ರಂಥರಚನೆಗೆ, ವಿಶೇಷವಾಗಿ ವ್ಯಾಕರಣ ಶಾಸ್ತ್ರಕ್ಕೆ ೨ನೇ ನಾಗವರ್ಮನೇ ಮೊದಲಿಗನು. ಈ ಗ್ರಂಥಗಳಲ್ಲಿ ಶಾಸ್ತ್ರ ಪಾಂಡಿತ್ಯ ಸಂಕಲನ



ಕೌಶಲ್ಯ ಪ್ರಯೋಗ ನಿಪುಣತೆಯ ಜೊತೆಗೆ ಒಂದು ಸೂಕ್ಷ್ಮವಾದ ರಸಗ್ರಹಣ ಶಕ್ತಿ, ಸಮನ್ವಯ ದೃಷ್ಟಿಗಳಿರುತ್ತವೆ. ಈ ನಾಗವರ್ಮನು ಅನುಕರುಣ ಶೀಲನಾದ ಜಡಬುದ್ಧಿಯ ಪಂಡಿತನಾಗಿರದೆ ವಿವೇಚಕ ಶಕ್ತಿಯುಳ್ಳ ವಿದ್ವಾಂಸನೂ, ವಿಮರ್ಶಕನೂ ಆಗಿದ್ದನು. ಜನ್ನನು ಇವನ ಹೆಸರನ್ನು ಜಿನೇಂದ್ರ ಪುರಾಣ ಕರ್ತೃಗಳ ಜೊತೆಗೆ ಸೇರಿಸಿದ ಕಾರಣ ಇವನು ಒಂದು ಜಿನಪುರಾಣವನ್ನು ಬರೆದಿರಬೇಕು. ಇವನು ಕಾವ್ಯ ನಿರ್ಮಾಣ ಶಕ್ತಿಯುಳ್ಳವನಾಗಿರಬೇಕೆಂದು ಇವನ ಉಪಲಬ್ಧ ಗ್ರಂಥಗಳಿಂದ ಊಹಿಸಬಹುದಾದ್ದರಿಂದ ಜನ್ನನ ಹೇಳಿಕೆ ಯಥಾರ್ಥವಾಗಿರಬಹುದು." ಎಂದು ಹೇಳಿದ ಮಾತು ಸಹಸಾ ಒಪ್ಪುವಂತಹದಾಗಿದೆ.

ಆದರಂತೆಯೇ ದಿವಂಗತ ತೀ. ನಂ. ಶ್ರೀಕಂಠಯ್ಯನವರು, ತಮ್ಮ ಭಾರತೀಯ ಕಾವ್ಯ ಮೀಮಾಂಸೆಯಲ್ಲಿ, ದ್ವಿತೀಯ ನಾಗವರ್ಮನನ್ನು ಕುರಿತು ಈ ಬಗೆಯಾಗಿ ಹೇಳಿದ್ದಾರೆ................... "ಅಂತೂ ಕವಿರಾಜಮಾರ್ಗದಿಂದ ಸುಮಾರು ಮೂರು ಶತಮಾನಗಳನ್ನು ದಾಟಬಂದ ಹೊರತು ಕಾವ್ಯಸ್ವರೂಪವನ್ನು ತಕ್ಕಮಟ್ಟಿಗೆ ಸಮಗ್ರವಾಗಿ ಪ್ರತಿಪಾದನೆ ಮಾಡುವ ಇನ್ನೊಂದು ಗ್ರಂಥ ಕಂಣಿಗೆ ಬೀಳುವದಿಲ್ಲ. ಈ ಎರಡನೇಯ ಕೃತಿಯೇ ಕರ್ಣಾಟಕ ಲಕ್ಷಣ ಶಿಕ್ಷಾಚಾರ್ಯನೆನ್ನಬಹುದಾದ ನಾಗವರ್ಮನ "ಕಾವ್ಯಾವಲೋಕನ."

ಪ್ರಸ್ತುತಕೃತಿಯಾದ 'ಕಾವ್ಯವಲೋಕನ'ದ ಹೊತ್ತಿಗೆಂದರೆ ಕನ್ನಡ ಸಾಹಿತ್ಯದಲ್ಲಿ ಇನ್ನೂ ಒಬ್ಬ ನಾಗವರ್ಮ ಆಗಲೇ ಪ್ರಸಿದ್ಧನಾಗಿದ್ದ. ಛಂದೋಂಬುಧಿ ಎಂಬ ಛಂದಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥವನ್ನೂ, ಬಾಣ ಕೃತವಾದ ಸಂಸ್ಕೃತ ಕಾದಂಬರಿಯ ಕನ್ನಡ ರೂಪಾನುವಾದವಾದ ಕರ್ನಾಟಕ ಕಾದಂಬರಿಯನ್ನೂ ಇವನು ರಚಿಸಿದ್ದಾನೆ. ವೆಂಗಿಪಳುವಿನಲ್ಲಿದ್ದ ವೆಣ್ಣಮಯ್ಯನೆಂಬ ಕೌಂಡಿನ್ಯ ಗೋತ್ರದ ಬ್ರಾಹ್ಮಣನ ಅಗ್ರತನೂಜ.

ಇವನಿಗೆ ಕವಿರಾಜಹಂಸ, ಬುಧಾಬ್ಜವನ ಕಳಹಂಸ, ಕಂದ ಕಂದರ್ಪ ನೆಗಳ್ತೆಗೋಜ ಆದಿಯಾಗಿ ಬಿರುದುಗಳು ಇದ್ದಂತಿವೆ. ಈತನು ಕವಿಯಾಗಿರುವಂತೆ ಯುದ್ಧ ವೀರನಾಗಿದ್ದಂತೆಯೂ ಕಾಣುತ್ತದೆ.

ರಚಿತ ಪದಪ್ರಸನ್ನ ಪರಿಪೂರ್ಣ ರಸಾವಹಮರ್ಥಯುಕ್ತ ಮಾ।
ಗುಚಿತ ಪುರಾಣ ಮಾರ್ಗ ಪದಪದ್ಧತಿ ಬಂಧುರ ಬಂಧುಮೆಂಬಿನಂ ॥
ರಚಿಯಿಸೆ ವಾಚ್ಯವಾಚಕ ವಿಶೇಷ್ಯ ವಿಶೇಷಣ ಲಕ್ಷ್ಯಲಕ್ಷಣ।
ಪ್ರಚುರತೆಕಾಳಿದಾಸನುಮನೇಳಿಸಿತೀ ಕವಿರಾಜಹಂಸನಾ ॥

ತನುವಿಂದೊಂದು ಗುಣಗಳಿಂದೆರಡು ಸಾಹಿತ್ಯಗಳಿಂ ಮೂಱು
ಮೇಣ್
ಮನದಿಂ ನಾಲ್ಕು ಮಳತ್ವದಯ್ದನೆ ಸುಚಾರಿತ್ರಂಗಳಿಂದಾಱು ಸ ॥
ಜ್ಜನ ದಿಂದೇೞು ಸುತತ್ವದಿಂದೆ ತಳೆದೆಂಟಂಗದ ಭುಜದ್ವಂದ್ವದೊಳ್ ॥
ತನಗಿನ್ನಾರ್ ಸರಿ ನಾಗವರ್ಮನೊಳೆ ದಾಸರ್ ಕಾಳಿದಾಸಂಬರಂ ॥

ಎಂದು ತನ್ನ ಹಿರಿಮೆಯನ್ನೂ ತನಗಿದ್ದ ಬಿರುದನ್ನೂ ಸಾರಿಕೊಂಡಿದ್ದಾನೆ. ಇವನಿಗೆ ನಾಕಿಗ ಸಯ್ಯಡಿಯಾತ ಎಂಬ ಹೆಸರುಗಳೂ ಇದ್ದಂತೆ ತಿಳಿಯುತ್ತದೆ.

ಆದರೆ ಕಾವ್ಯಾವಲೋಕನವನ್ನು ರಚಿಸಿದ ೨ ನೇ ನಾಗವರ್ಮನಿಗೂ, ಛಂದೋಬುಧಿ ಕಾದಂಬರಿಗಳನ್ನು ರಚಿಸಿದ ೧ ನೇ ನಾಗವರ್ಮನಿಗೂ, ನಾಮ ಸಾದೃಶ್ಯದ ವಿನಾ ಇನ್ನಾವ ಸಂಬಂಧವೂ ಇಲ್ಲ. ೧ ನೇ ನಾಗವರ್ಮನ ಕಾಲ ಕ್ರಿ. ಶ. ೧೦ ನೇ ಶತಮಾನದ ಕೊನೆ ಮತ್ತು ೧೧ ನೇ ಶತಮಾನದ ಆದಿಭಾಗ. ೨ ನೇ ನಾಗವರ್ಮನ ಕಾಲ ೧೨ ನೇ ಶತಮಾನದ ಮಧ್ಯ ಮತ್ತು ಉತ್ತರ ಭಾಗ. ಈ ಇಬ್ಬರು ನಾಗ



ವರ್ಮರಲ್ಲದೆ "ಚಂದ್ರ ಚೂಡಾಮಣಿ ಶತಕ"ವೆಂಬ ಕೃತಿಯನ್ನು ರಚಿಸಿದ ಮೂರನೇ ನಾಗವರ್ಮನೊಬ್ಬ ಬೇರೆಯೇ ಆಗಿದ್ದಾನೆ.

ಪ್ರಸಕ್ತ ನಮಗೆ ಕಾವ್ಯಾವಲೋಕನದ ಕರ್ತೃವಾದ ೨ ನೇ ನಾಗವರ್ಮನ ಬಗ್ಗೆ ವಿಚಾರ ಮಾಡುವದಿದೆ. ಈತನು ಜಾತಿಮತದಿಂದ ಜೈನನು. ಚಾಳುಕ್ಯರ ಜಗದೇಕ ಮಲ್ಲನಲ್ಲಿ (ಕ್ರಿ. ಶ. ೧೧೩೮ ರಿಂದ ೧೧೫೦) ಕಟಕೋಪಾಧ್ಯಾಯನಾಗಿದ್ದವನು. ಜನ್ನನು ತನ್ನ ಅಜಿತನಾಥ ಪುರಾಣದಲ್ಲಿ ಇವನನ್ನು ಹೊಗಳಿದ್ದಾನೆ.

ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾ ನಾಗವ।
ರ್ಮನಿದಾನೀಂತನಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯನಿಂ ॥
ದು ನೃಸಿಂಹ ಕ್ಷಿತಿಪಾಲನಲ್ಲಿ ಕಟಕೋಪಾಧ್ಯಾಯನಾರೆಂಬ ಸೂ।
ಕ್ತಿನವೀನೋಜ್ಜ್ವಲ ಬಾಣನಪ್ಪ ಸಮನೋ ಬಾಣಂ
ಕವಿಶ್ರೇಷ್ಠರೊಳ್ ॥

ಇವನಿಗೆ ಕವಿತಾಗುಣೋದಯ ಕವಿಕರ್ಣಪೂರ ಮೊದಲಾದ ಬಿರುದುಗಳಿದ್ದವು.

ಕಾವ್ಯಾವಲೋಕನದ ೪೨೩ ನೇ ಪದ್ಯದಲ್ಲಿ ಈ ಕವಿ,

ಚಂ॥ ಅಭಿಮತ ಶಬ್ದಸಂಸ್ಮರಣದಿಂ ಜನಮಂ ತಿಳಿವಂತು ಮಾಡಿ
ವಾ।
ಗ್ವಿಭವಮುದ ಪ್ರತ್ಯರ್ಕಮೆನೆ ಸಂದೆಸಕಂ ದೆಸೆಯಂತನೆಯ್ದೆ ತ ॥

ತ್ಸಭೆಗಳೊಳಗ್ರಪೂಜೆವಡೆದೊಂದು ಮಹಾಮಹಿಮಾನುಭಾವಧಿಂ ।
ದಭಿನವಶರ್ವವರ್ಮನಿವನೆಂದವುದುರ್ವರೆನಾಗವರ್ಮನಂ ॥

ಹೇಳಿದ ಪದ್ಯವನ್ನು ನೋಡಿದರೆ ಇವನಿಗೆ ಅಭಿನವ ಶರ್ವವರ್ಮ ಎಂಬ ಬಿರುದು ಇದ್ದಿರುವಂತೆ ಕಂಡು ಬರುತ್ತದೆ. ತನ್ನ ಕಾವ್ಯ ಸಾಮರ್ಥ್ಯದ ಬಗ್ಗೆ ಅವನು,

ಸಾರವಿಚಾರ ಬಂಧುರಮತಿಪ್ರಸರಂ ಪರಿಪಕ್ವ ಶಾಸ್ತ್ರ ಸಂ ।
ಸ್ಕಾರನುಪೇತ ಕೌತುಕರಸಂ ವಿದಿತಾಗಮಲೋಕವೃತ್ತನು ॥
ತ್ಸಾರಿತ ಮತ್ಸರಂ ಸುಜನ ವತ್ಸಳನೆಲ್ಲಿಯು ವೀತನೆಂದು ಕೆ ।
ಯ್ವಾರದೆ ಬಣ್ಣಿಕುಂ ವಿಬುಧ ಮಂಡಳಿ ಪಂಡಿತ ನಾಗವರ್ಮನಂ ॥

ಶ್ರುತದೇವೀ ಮಕರಂದಕಲ್ಪಲಪನಂ ವಾಕ್ಶ್ರೀನಿವಾಸಾಂಬುಜಾ ।
ಯತವಕ್ತ್ರಂ ರಸಭಾವ ಭಾಸುರ ಸಮುದ್ಯದ್ಭಾರತೀ ನರ್ತ ನೋ ।
ಚಿತರಂಗ ಪ್ರತಿಮಾನನಂ ಪ್ರವಿಸಲದ್ವಾಕ್ಸುಂದರೀ ಕುಂಕುಮಾಂ ।
ಕಿತ ಕೇಳೀಭವನಾಜಿರೋಪಮಮುಖಂ ಭೂಭಾಗದೊಳ್
ನಾಕಿಗಂ ॥

ಸಾಮಾನ್ಯ ವಾಚಿಗಳ ನೀತಿಬಿದಿಂದನನ್ಯ ।
ಸಾಮಾನ್ಯ ಮಾನ್ಯ ಸುಚರಿತ್ರ ಗುಣಾವತಾರಂ ॥
ಸಾಮಾನ್ಯಮಪ್ಪ ಜನಮುಂ ತಿಳಿವಂತು ಪೇಲ್ದಂ ।
ದಾಮೋದರ ಪ್ರಿಯಸುತಂ ಕವಿಕರ್ಣಪೂರಂ ॥

ಎಂಬ ಪದ್ಯಗಳನ್ನು ಅವಲೋಕಿಸಿದರೆ, ಇವನು ಲಾಕ್ಷಣಿಕನಲ್ಲದೆ ಕವಿಯೂ ಆಗಿದ್ದನೆಂಬುವದಕ್ಕೆ ಆಧಾರವಿರುವಂತಿದೆ. ಜಿನೇಂದ್ರ ಪುರಾಣಗಳನ್ನು ರಚಿಸಿದ ಪೂರ್ವದ ಕವಿಗಳನ್ನು ಸ್ಮರಿಸುವಲ್ಲಿ ಜನ್ನ ಕವಿ–



ಎನಗನಕೂಲಮಕ್ಕೆ ಗುಣವರ್ಮನ ಜಾಣ್ನುಡಿ ಪಂಪನಿಂಪು ಪೊ ।
ನ್ನನ ಬಗೆ ನಾಗವರ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ ॥
ದ್ರನ ರಸಭಾವ ಮಗ್ಗಳನ ವಕ್ರತೆ ನೇಮಿಯದೇಸೆ ಪುಷ್ಪಬಾ ।
ಣನ ಮೃದು ಬಂಧಮೀ ಕವಿಗಳಲ್ತೆ ಜಿನೇಂದ್ರ ಪುರಾಣ
ಕರ್ತೃಗಳ್ ॥

ಎಂದು ಜಿನ ಪುರಾಣ ಕರ್ತೃಗಳ ಸಾಲಿಗೆ ತನಗೆ ಉಪಾಧ್ಯಾಯನಾಗಿದ್ದ ನಾಗವರ್ಮನನ್ನು ಸೇರಿಸಿದ್ದಾನೆ. ಆದರೆ ಇವನು ಯಾವ ಪುರಾಣವನ್ನು ಬರೆದಿದ್ದಾನೊ ತಿಳಿಯದು. ತನ್ನ ಇನ್ನಿತರ ಕೃತಿಗಳಲ್ಲಿಯೂ ಅವನು ಆ ಬಗ್ಗೆ ಹೇಳಿಲ್ಲ. ಆದರೆ ಈ ಕೃತಿಗಳನ್ನು ಬರೆದ ನಂತರ, ಜೀವನದ ಸಂಧ್ಯಾಕಾಲದಲ್ಲಿ 'ಬೆಳುಗುವೆನಿಲ್ಲಿ ಲೌಕಮನಲ್ಲಿ ಜಿನಾಗಮಮಂ' ಎಂಬಂತೆ ಜಿನಪುರಾಣವನ್ನು ಬರೆದಿರಬಹುದಾಗಿದೆ. ಇವನಿಗೆ ಸಮಕಾಲೀನನಾಗಿ ಶಿಷ್ಯನಾಗಿ ಇದ್ದ ಜನ್ನ, ಇಂಥ ಕೃತಿ ಇಲ್ಲದೆ ಇದ್ದ ಪಕ್ಷದಲ್ಲಿ, ನಾಗವರ್ಮನನ್ನು ವಿನಾಕಾರಣವಾಗಿ ಪುರಾಣ ಕರ್ತೃಗಳ ಸಾಲಿಗೆ ಸೇರಿಸುತ್ತಿರಲಿಲ್ಲ. ಆದರೆ ಸದ್ಯ ಈ ಕೃತಿ ಉಪಲಬ್ಧವಿಲ್ಲದ್ದರಿಂದ ಅದರ ಬಗ್ಗೆ ಏನನ್ನೂ ಹೇಳುವದು ಸಾಧ್ಯವಿಲ್ಲ.

ಕಾವ್ಯಾವಲೋಕನದ ೯೬೫ ನೆಯ ಪದ್ಯದಲ್ಲಿ ಇವನು ತನ್ನಿಂದ ರಚಿತವಾದ ಕೃತಿಗಳ ಬಗ್ಗೆ—

ಛಂದೋವಿಚಿತಿಯಲಂಕೃತಿ ।
ಸಂದಭಿಧಾನ ಕೋಶವೆಂಬಿವು ವಾಕ್ ಶ್ರೀ ॥
ಸುಂದರಿಗೆ ರತ್ನಮಂಡನ– ।
ದಂದದೊಳಿರ್ದಪುವು ನಾಗವರ್ಮನ ಕೃತಿಗಳ್ ॥

ಎಂದು ಹೇಳಿದ್ದನ್ನು ನೋಡಿದರೆ, ಅಲಂಕೃತಿ—ಅಂದರೆ ಕಾವ್ಯಾವಲೋಕನ, ಅಭಿದಾನ ವಸ್ತು ಕೋಶವು—ಸಂಸ್ಕೃತ ಪದಗಳಿಗೆ ಕನ್ನಡ ಅರ್ಥವನ್ನು ತಿಳಿಸುವ ಪದ್ಯರೂಪದಲ್ಲಿಯ ನಿಘಂಟು ಹಾಗೂ ಛಂದೋ ವಿಚಿತಿ ಎಂಬುದು ಕದಾಚಿತ್ ಛಂದ ಶಾಸ್ತ್ರವನ್ನು ಕುರಿತಾದ ಗ್ರಂಥವಾಗಿರಬಹುದಾಗಿದೆ— ಇವನು ಈ ಮೂರೂ ಕೃತಿಗಳ ಕರ್ತೃವೆಂಬ ಬಗ್ಗೆ ಸಂದೇಹವೇ ಉಳಿಯುವದಿಲ್ಲ. ಛಂದೋವಿಚಿತಿ ಕೃತಿಯು ಸದ್ಯ ಉಪಲಬ್ಧವಿಲ್ಲ. ಈ ಮೂರೂ ಕೃತಿಗಳನ್ನುಳಿದು ಇವನು ಕನ್ನಡ ಭಾಷೆಯ ವ್ಯಾಕರಣವನ್ನು ಸೂತ್ರರೂಪವಾಗಿ ತಿಳಿಸುವ "ಕರ್ಣಾಟಕಭಾಷಾಭೂಷಣ" ವೆಂಬ ಸಂಸ್ಕೃತ ಗ್ರಂಥವನ್ನು ರಚಿಸಿದ್ದಾನೆ.

ಕನ್ನಡದಲ್ಲಿ ಸ್ವತಂತ್ರವಾಗಿ ಕಾವ್ಯಗ್ರಂಥಗಳ ರಚನೆಯಾಗಿದ್ದರೂ, ಅವೆಲ್ಲಕ್ಕೂ ಸಂಸ್ಕೃತವೇ ಆಧಾರಭೂತವಾದ ಸಾಹಿತ್ಯ. ಕನ್ನಡದಲ್ಲಿ ನಿರ್ಮಿತವಾದ ಸಾಹಿತ್ಯ ಸಂಸ್ಕೃತದಿಂದ ಉಸ್ಫೂರ್ತಗೊಂಡಿದೆ. ಪ್ರಸ್ತುತ ಕೃತಿಯಾದ ಕಾವ್ಯಾವಲೋಕನವೂ ತತ್‌ಪೂರ್ವದಲ್ಲಿಯ ಸಂಸ್ಕೃತ ಲಾಕ್ಷಣಿಕ ಗ್ರಂಥಕ್ಕೆ ಋಣಿ. ನಾಗವರ್ಮನೇ ಕಾವ್ಯಾವಲೋಕನದ ಕೊನೆಯಲ್ಲಿ,

ವಾಮನನುಂ ರುದ್ರಟನುಂ ।
ಭಾಮುಹನುಂ ದಂಡಿಯುಂ ಮನಂಗೊಳೆ ಪೇಳ್ದಂ ॥
ಈ ಮಹಿಗೆ ನೆಗಟ್ತೆ ಪೇಳ್ದಂ ।
ದಾಮೋದರ ತನಯನೀ ವಚೋಲಂಕೃತಿಯಂ ॥

ಎಂದು ಹೇಳಿದ್ದಾನೆ. ಇದರ ಬಗ್ಗೆ ಪ್ರಾಚ್ಯ ವಿದ್ಯಾಸಂಶೋಧ್ನನಾಲಯ ಕನ್ನಡ ಗ್ರಂಥಮಾಲೆಯಲ್ಲಿ ೪೩ ಪ್ರಕಟನೆಯಾಗಿ ಅಚ್ಚಾದ ಕಾವ್ಯಾವಲೋಕನದ ಮುನ್ನುಡಿಯಲ್ಲಿ ಅದನ್ನು ಸಂಪಾದಿಸಿದ ಶ್ರೀ ಎಂ. ಎಸ್. ಬಸವಲಿಂಗಯ್ಯನವನರು "ಕಾವ್ಯಾವಲೋಕನವು ಮೇಲೆ ಹೇಳಿದ



ಸಂಸ್ಕೃತ ಲಕ್ಷಣ ಗ್ರಂಥಗಳ ಸೂತ್ರೋದಾಹರಣೆಗಳ ಛಾಯೆಯಿಂದ ತುಂಬಿದೆ. ನಾಗವರ್ಮನು ತನ್ನ ಗ್ರಂಥದ ಅಧಿಕರಣಗಳ ವಿಭಜನೆಯಲ್ಲಿಯೂ, ಅವುಗಳಿಗೆ ಹೆಸರನ್ನಿಡುವದರಲ್ಲಿಯೂ ವಾಮನನನ್ನೇ ಅನುಸರಿಸಿರುತ್ತಾನೆ. ಆದರೆ ಇವನ ಗ್ರಂಥದ ಎರಡು ಮೂರನೆಯ ಅಧಿಕರಣ ಮತ್ತು ನಾಲ್ಕನೆಯದರ ಕೆಲವು ಭಾಗಗಳನ್ನು ರುದ್ರಟನ ಗ್ರಂಥದೊಡನೆ ಹೋಲಿಸಿದರೆ, ಈತನು ರುದ್ರಟನ ಮತವನ್ನೇ ಸಂಪೂರ್ಣವಾಗಿ ಅಂಗೀಕರಿಸಿರುವಂತೆ ಸ್ಪಷ್ಟಪಡುತ್ತದೆ. ಈತನ ಕವಿಸಮಯಾದಿಕರಣವು ರಾಜಶೇಖರನ ಕಾವ್ಯಮಿಮಾಂಸೆಯ ಹತ್ತನೆಯ ಅಧ್ಯಾಯದ ಆದಿಯಲ್ಲಿ ಹೇಳಿರುವ ಕಾವ್ಯವಿದ್ಯೆಗಳಾದ ನಾಮಪಾರಾಯಣ, ಧಾತುಪಾರಾಯಣ, ಛಂದೋವಿಚಿತಿ ಅಲಂಕಾರತಂತ್ರ ಇವುಗಳಲ್ಲಿ ನಾಗವರ್ಮನು ಪ್ರವೀಣನೆಂಬುದನ್ನು ವ್ಯಕ್ತಪಡಿಸುವದಕ್ಕಾಗಿಯೂ, ಆ ಕಾವ್ಯವಿದ್ಯೆಗಳನ್ನೇ ತಾನು ಲೋಕಕ್ಕೆ ಉಪದೇಶಿಸುತ್ತಿರುವೆನೆಂದು ಸೂಚಿಸುವದಕ್ಕಾಗಿಯೂ ಇವನು ತನ್ನ ಗ್ರಂಥಗಳಿಗೆ ಅದೇ ಹೆಸರನ್ನು ಕೊಟ್ಟಿರಬಹುದೆಂದು ಊಹಿಸಲು ಅವಕಾಶವಿದೆ." ಎಂದು ಹೇಳಿದ್ದನ್ನು ಅವಲೋಕಿಸಿದರೆ, ನಾಗವರ್ಮನು ತಾನು ಹೆಸರಿಸಿದ ನಾಲ್ವರು ಸಂಸ್ಕೃತ ಲಾಕ್ಷಣಿಕರಾದ, ವಾಮನ, ರುದ್ರಟ, ಭಾಮಹ ಹಾಗೂ ದಂಡಿ ಇವರುಗಳಿಗೆ ಗ್ರಂಥಋಣಿಯಾಗಿರುವಂತೆ, ಅಲಂಕಾರಸಾರಸಂಗ್ರಹದ ಉದ್ಭಟನನಿಗೆ, ಕಾವ್ಯಮೀಮಾಂಸಾ ಕರ್ತೃವಾದ ರಾಜಶೇಖರನಿಗೆ ಹಾಗೂ 'ಕಾವ್ಯಕಲ್ಪಲತಾ'ಕಾರನಾದ ಅಮರಚಂದ್ರ ಇವರುಗಳಿಗೂ ವಿಷಯ ಸಂಗ್ರಹದ ವಿಷಯದಲ್ಲಿ ಋಣಿಯಾಗಿದ್ದಾನೆಂದು ಹೇಳಬಹುದು. ನಾಗವರ್ಮನ ಕಾಲದ ಹೊತ್ತಿಗೇನೇ ಧ್ವನ್ಯಾಲೋಕದ ಆನಂದವರ್ಧನ, ಕವಿರಾಜಮಾರ್ಗದ ನೃಪತುಂಗರು ಹೆಸರಾಂತ ಗ್ರಂಥಕಾರರೆಂದು ಕೀರ್ತಿಪಡೆದಿದ್ದರು. ಆದರೆ ನಾಗವರ್ಮ ತನ್ನ ಯಾವ ಕೃತಿಗಳಲ್ಲಿಯೂ ಇವರನ್ನು ನೆನೆಯಿದೆ ಇರುವದು ಆಚ್ಚರಿಯೆನಿಸುವದು. ಇದಕ್ಕೆ ಕಾರಣ ಮಾರ್ಗಭಿನ್ನತೆಯೇ ಮುಖ್ಯವಾಗಿರಬೇಕಲ್ಲದೆ ಅನ್ಯಥಾ ಭಾವನೆಗೆ ಅವಕಾಶವಿಲ್ಲ.

● ನೃಪತುಂಗನ "ಕವಿರಾಜಮಾರ್ಗದ" ನಂತರ ಮುನ್ನೂರು ವರುಷಗಳ ಅವಧಿಯಲ್ಲಿ ವ್ಯಾಕರಣ ಅಲಂಕಾರಗಳ ವಿವರಣೆಗೇ ಮೀಸಲಾದ ಇನ್ನೊಂದು ಕೃತಿ ನಿರ್ಮಿತವಾಗಲಿಲ್ಲ. ಕಾವ್ಯಾವಲೋಕನವೇ ಅನಂತರ ಬಂದ ಮಹತ್ಕೃತಿ. ನಾಗವರ್ಮನ ಸಮಕಾಲೀನನಾಗಿರಬಹುದಾದ ಉದಯಾದಿತ್ಯನೆಂಬ ಚೋಳರಾಜನು, ಉದಯಾದಿತ್ಯಾಲಂಕಾರವೆಂಬ ಒಂದು ಅಲಂಕಾರ ಗ್ರಂಥವನ್ನು ಬರೆದಿದ್ದಾನೆ. ಕನ್ನಡದಲ್ಲಿ ರಚಿತವಾದ ಈ ಕೃತಿಯಲ್ಲಿ ಯಾವ ಪೂರ್ವದ ಕನ್ನಡ ಕವಿಯ–ಲಾಕ್ಷಣಿಕನ ಹೆಸರು ಕಾಣಿಸದಿರುವದು ಅಚ್ಚರಿಯ ಮಾತಾಗಿದೆ. ಕಾವ್ಯಾವಲೋಕನದ ಬಗ್ಗೆ ದಿವಂಗತ ಶ್ರೀ. ತೀ. ನಂ. ಶ್ರೀಕಂಠಯ್ಯನವರು – ಚಿಕ್ಕದಾದರೂ ಚೊಕ್ಕವಾದ ಮಾತನ್ನು ಹೇಳಿ ಅದರ ಮಹತಿಯನ್ನು ಕೊಂಡಾಡಿದ್ದಾರೆ–"ಕಾವ್ಯಾವಲೋಕನದಲ್ಲಿ ಶಬ್ದಸ್ಮೃತಿ, ಕಾವ್ಯಮಲವ್ಯಾವೃತ್ತಿ, ಗುಣವಿವೇಕ, ರೀತಿಕ್ರಮ, ರಸನಿರೂಪಣ, ಕವಿಸಮಯ ಎಂಬ ಐದು ಅಧಿಕರಣಗಳಿವೆ. ಸೂತ್ರಗಳಿಗೆಲ್ಲ ಪ್ರಾಚೀನ ಕನ್ನಡ ಕಾವ್ಯಗಳಿಂದ ಉದಾಹರಣೆಗಳನ್ನು ಆಯ್ದು ಕೊಟ್ಟಿರುವದು ನಾಗವರ್ಮನ ವಿಶೇಷ ಗುಣ (ಇದರಿಂದ ಕನ್ನಡದ ಹಿಂದಿನ ಅನೇಕ ಕವಿಕಾವ್ಯಗಳ ವಿಷಯವನ್ನು ತಿಳಿಯಲು ಸಹಾಯವಾಗಿದೆ.) ಒಮ್ಮೊಮ್ಮೆ ನಾಗವರ್ಮನು ಸಂಸ್ಕೃತ ಲಕ್ಷಣ ಗ್ರಂಥಗಳಲ್ಲಿ ಕಾಣಬರುವ ಉದಾಹರಣ ಪದ್ಯಗಳನ್ನು ಕನ್ನಡಿಸಿ ಕೊಟ್ಟಿರುವಂತೆ ತೋರಿದರೂ ಇಂಥವು ಬಲು ಕಡಿಮೆ. 'ಶಬ್ದಸ್ಮೃತಿ'ಯಲ್ಲಿ ನಾಗವರ್ಮನು ಕನ್ನಡ ವ್ಯಾಕರಣವನ್ನು ಸಂಗ್ರಹವಾಗಿ, ಆದರೆ ಸಾಧಾರವಾಗಿ ಹೇಳಿದ್ದಾನೆ. ಶಬ್ದಸ್ಮೃತಿ ಕಾವ್ಯಾವಲೋಕನದ ಒಂದು ಭಾಗವಾಗಿದ್ದರೂ ಅದನ್ನೇ ಪ್ರತ್ಯೇಕಿಸಿ ತೆಗೆದುಕೊಂಡರೆ ಕನ್ನಡಕ್ಕೊಂದು ಸ್ವತಂತ್ರ ವ್ಯಾಕರಣವಾಗುತ್ತದೆ. ನಮಗೆ ದೊರೆತಿರುವ ಕನ್ನಡ ವ್ಯಾಕರಣಗಳಲ್ಲಿ ಇದೇ ಮೊದಲನೆಯದು. ಇದನ್ನೂ ನಾಗವರ್ಮನ ಇನ್ನೊಂದು ಕೃತಿಯಾದ ಭಾಷಾಭೂಷಣವನ್ನೂ ಉಪಯೋಗಿಸಿಕೊಂಡೇ ಕೇಶಿರಾಜನು ತನ್ನ ಶಬ್ದಮಣಿದರ್ಪಣವನ್ನು ಬರೆದಿರುವದು. ವಿಷಯ ಸಂಗ್ರಹ–ಪ್ರಯೋಗ ಸಂಪತ್ತು ಈ ಎರಡರಲ್ಲೂ ಕೇಶಿರಾಜನು ನಾಗವರ್ಮನಿಗೆ ತುಂಬ ಋಣಿಯಾಗಿದ್ದಾನೆ. (ಭಾರತೀಯ ಕಾವ್ಯ ಮೀಮಾಂಸೆ)



ವ್ಯಾಕರಣಕ್ಕೆ ಸಂಬಂಧಿತವಾದ ವಿಷಯಗಳು ಪ್ರಾಸಂಗಿಕವಾಗಿ ಕವಿರಾಜಮಾರ್ಗದಲ್ಲಿ ಬಂದಿರುವವಾದ್ದರಿಂದ ಅದನ್ನು ವ್ಯಾಕರಣ ವಿವರಣೆಗೆ ಮೀಸಲಾದ ಸಮಗ್ರ ಕೃತಿಯೆಂದು ಹೇಳಲಾಗದು. ಆದರೆ ಕಾವ್ಯಾವಲೋಕನದಲ್ಲಿಯ ಶಬ್ದಸ್ಮೃತಿ ಎನ್ನುವ ವಿಭಾಗದಲ್ಲಿ ವ್ಯಾಕರಣದ ಶಾಸ್ತ್ರೀಯ ವಿವೇಚನೆ ಇದೆ. ಅಲ್ಲದೆ ಯಾವುದೇ ಪೂರ್ವದ ಗ್ರಂಥದಿಂದಲೂ ಇದು ಪ್ರಭಾವಿತವಾಗಿಯಾಗಲೀ ಅನುವಾದಿತವಾಗಿಯಾಗಲೀ, ರಚಿತವಾದುದಲ್ಲದ್ದರಿಂದ, ಸ್ವತಂತ್ರ ಕೃತಿಯೆಂದೇ ಹೇಳಬಹುದು. ಇವನ ಶಬ್ದಸ್ಮೃತಿಯ ಬಗ್ಗೆ ಕನ್ನಡ ಕಾವ್ಯಾವಲೋಕನದ ಸಂಪಾದಕರಾದ ಶಿವೈಕ್ಯ ಶ್ರೀ. ಶಿ.ಶಿ. ಬಸವನಾಳರು ತಮ್ಮ ಸಂಪಾದಕೀಯದಲ್ಲಿ ಹೇಳುವದೇನೆಂದರೆ–'ಕನ್ನಡ ನುಡಿಗೆ ವ್ಯಾಕರಣವನ್ನು ಕನ್ನಡದಲ್ಲಿಯೂ ಸಂಸ್ಕೃತದಲ್ಲಿಯೂ ಇವನೇ ಮೊದಲು ಬರೆದನು. ಕೇಶಿರಾಜನ ಶಬ್ದಮಣಿದರ್ಪಣವು (ಸು. ೧೨೬೦) ಇವನ ಶಬ್ದಸ್ಮೃತಿಯ ಆಧಾರದಿಂದಲೇ ಹೆಚ್ಚು ವಿಸ್ತಾರವಾಗಿ ರಚಿತವಾಗಿದೆ. ಅದರಲ್ಲಿಯ ಅನೇಕ ಉದಾಹರಣೆಗಳು ಕಾವ್ಯಾವಲೋಕನದಿಂದಲೇ ಎತ್ತಿಕೊಂಡುವುಗಳಾಗಿವೆ ಕನ್ನಡ ಭಾಷೆಯ ವ್ಯಾಕರಣವನ್ನು ವಿಸ್ತಾರವಾಗಿ ಪ್ರತಿಪಾದಿಸುವ ಸಂಸ್ಕೃತಗ್ರಂಥವಾದ ಭಟ್ಟಾಕಲಂಕನ (೧೭ ನೇ ಶತಮಾನ) ಶಬ್ದಾನುಶಾಸನಕ್ಕೂ ನಾಗವರ್ಮನ ಗ್ರಂಥಗಳು ಮಾದರಿಯಾಗಿವೆ. ಸಾಳ್ವನು ರಸರತ್ನಾಕರವೆಂಬ ತನ್ನ ಗ್ರಂಥಕ್ಕೆ ಕಾವ್ಯಾವಲೋಕನದ ರಸ ಪ್ರಕರಣವು ಆಧಾರವೆಂದು ಕಂಠೋಕ್ತವಾಗಿ ಹೇಳಿದ್ದಾನೆ......................"

ಇಲ್ಲಿಯ ವರೆಗೆ ಕವಿ ಶಾಸ್ತ್ರಕಾರನಾದ ೨ ನೇ ನಾಗವರ್ಮನ ಪರಿಚಯವನ್ನು, ಅವನ ಕೃತಿಯಾದ ಕಾವ್ಯಾವಲೋಕನದ ಸಮಾಲೋಚನೆಯನ್ನು ಸಾದ್ಯಂತವಾಗಿ ಮಾಡಿದ್ದಾಯಿತು. ನಾಗವರ್ಮ, ಕನ್ನಡ ವ್ಯಾಕರಣಕ್ಕೆ–ನಿಘಂಟುವಿಗೆ ಹಾಗೆಯೇ ಕನ್ನಡದ ವ್ಯಾಕರಣವನ್ನು ಸೂತ್ರರೂಪದಲ್ಲಿ ಸಂಸ್ಕೃತಕ್ಕೆ ತಿರುಗಿಸಿದವರಲ್ಲಿ ಆದ್ಯ. ಕನ್ನಡದಲ್ಲಿ ಅನಂತರ ಬಂದ ಶಬ್ದಮಣಿದರ್ಪಣದಂತಹ ವಿಸ್ತ್ರತ ಕೃತಿಗೆ ಸ್ಫೂರ್ತಿಸ್ಥಾನ. ರಸರತ್ನಾಕರ ಕರ್ತೃ ತಿಮ್ಮನಿಗೆ ಆಧಾರಭೂತ. ಕನ್ನಡ ವೈಯಾಕರಣಿಗಳಿಗೆ ಕವಿಗಳಿಗೆ ಕೈಗನ್ನಡಿ. ಅವನು ತಾನೇ ತನ್ನ ಕಾವ್ಯಾವಲೋಕನದ ಶಬ್ದಸ್ಮೃತಿಯ ೪ ನೇ ಪದ್ಯದಲ್ಲಿ

ಕವಿಗಳ್ಗಿದು ಕೈಯ್ಗನ್ನಡಿ
ಕವಿತೆಗೆ ಬಾಟಿಸ್ಕ್ರೂದಲುದಾತ್ತವಾಗ್ದೇವತೆಗು
ಧ್ರುವಹೇತುಕೋಶಗೃಹಮೆನೆ
ಭುವನದೊಳಿದು ಪರೆದು ನಿಲ್ವುದೊಂದಚ್ಚರಿಯೇ ॥

ಎಂದು ತನ್ನ ಕೃತಿ ಮಹತಿಯನ್ನು ಸಾರಿಕೊಂಡಿದ್ದಾನೆ.

ಪ್ರಸ್ತುತ ಗ್ರಂಥದಲ್ಲಿ ಕಾವ್ಯಾವಲೋಕನದ 'ಶಬ್ದಸ್ಮೃತಿ' ಎನ್ನುವ ವ್ಯಾಕರಣ ಭಾಗವನ್ನಷ್ಟೇ ಸಂಪಾದಿಸಿ ಕನ್ನಡ ವಾಚಕ ವೃಂದಕ್ಕೆ ಸಾದರ ಪಡಿಸಿದ್ದೇವೆ. ಕನ್ನಡಿಗರು ಇದನ್ನು ಆದರದಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇವೆ.





* * * *

# ಶಬ್ದಸ್ಮೃತಿ

* * * *

# ಪರಿವಿಡಿ



———

K.S. Anantha Krishna

ನಾಗವರ್ಮವಿರಚಿತ

# ಶಬ್ದಸ್ಮೃತಿ

॥ ಶ್ರೀವಿತ ರಾಗಾಯನಮಃ ॥

## ಪೀಠಿಕಾ ಸಂಧಿ

ಶ್ರೀವರ್ಧಮಾನನಾನತ
ದೇವಾಧಿಪ ಮಕುಟಕೋಟಿ ಘಟ್ಟಿತ ಚರಣಂ:
ಕೇವಲ ವಿಬೋಧಲೋಚನ
ನಾವಗ ಮೊಲ್ದೀಗೆ ವಾವ್ಯದೊಳ್ ನಮಗಱಿವಂ ೧.

ಪರಮಾಗಮ ಮೂರ್ತಿಚರಾ
ಚರಲೋಕಾಲೋಕ ಸಂಪ್ರದಾಯಿನಿ ವಿಬುಧೋ
ತ್ಕರ ಮಾನಸಾಬ್ಜವಾಸಿನಿ
ಸರಸ್ವತೀ ದೇವಿ ವರದೆಯಕ್ಕೆಮಗೆಂದುಂ- ೨.

ಸಕಲಬುಧ ಸಮಿತಿ ನೆಱೆಕೊಂ
ಡು ಕೊನೆದು ನಲವಿಂದೆ ಕೀರ್ತಿಸುತ್ತಿರೆ ಮುದದಿಂ
ಸುಕರಮದಾಗಿರೆ ಕರ್ಣಾ
ಟಕದಿಂ ಕಾವ್ಯಲೋಕಮಂ ವಿರಚಿಸುವೆಂ ೩.

ಕವಿಗಳ್ಗದು ಕೈಯ್ಗನ್ನಡಿ
ಕವಿತೆಗೆ ಬಾಟಿಮ್ಮದಲುದಾತ್ತ ವಾಗ್ದೇಫಕೆಗು
ಧ್ರುವಹೇತು ಕೋಶಗೃಹಮೆನೆ
ಭುವನದೊಳದು ಪರೆದು ನಿಲ್ಪುದೊಂದಚ್ಚರಿಯೇ ೪.

ಸಮುಚಿತ ಶಬ್ದಸ್ಮೃತಿ ಕಾ
ವ್ಯಮಲವ್ಯಾಪೃತ್ತಿ ಗುಣವಿವೇಕಂ ರೀತಿ
ಕ್ರಮ ರಸ ನಿರೂಪಣಂ ಕವಿ
ಸಮಯಮಿವಿಂತಯ್ದುಮಿದಱೊಳಧಿಕರಣಂಗಳ್ ೫.

—·—



## ಶಬ್ದಸ್ಮೃತಿ

ಮಹಾಸ್ರಗ್ಧರೆ.

ಪರಮಾರ್ಥಂ ಪೇೞಿಪಟ್ಟರ್ದಧಿಕರಣ ಮಿವಿಂತಯ್ದಱೊಳ್ ಶಬ್ದಸಿದ್ಧಿ
ಸ್ಮರಣಕಾದ್ಯಕ್ಕುದಾತ್ತ ಪ್ರಕರಣ ಗಣನಾವೃತ್ತಿಯಿಂ ಪೊರ್ದಿ ಸಿಲ್ಕು
ತರದಿಂದಂ ಸಂಧಿ ನಾಮಸ್ಥಿತಿ ವಿತತ ಸಮಾಸ ಕ್ರಮಂ ತದ್ಧಿತಂ ವಿ
ಸ್ತರ ರೂಪಾಖ್ಯಾತ ಮಾಖ್ಯಾತಮು ಮೆನೆದೊರೆವೆತ್ತಯ್ದು ೬
ಮಧ್ಯಾಯ ವರ್ಗಂ.

### ೧. ಸಂಜ್ಞಾ ಪ್ರಕರಣಂ.

ಸೂತ್ರಂ ನಂ. ೧

ಸ್ವರಮೆಂದುಂ ವ್ಯಂಜನ ಮೆಂ
ದೆರಡಕ್ಕುಂ ವರ್ಣಭೇದ ಮಾದ್ಯಕ್ಷರದಿಂ
ಬರೆ ಪದಿನಾಲ್ಕಂ ಸ್ವರಮಿಂ
ಪರಿಶೇಷಂ ವ್ಯಂಜನಂಗಳರೆ ಮಾತ್ರಿಕೆಗಳ್ ೭

ಉದಾಹರಣೆ:

ಸ್ವರಕ್ಕೆ

ನಿರುಪಮರಮೇಯ ಮಹಿಮರ್
ಚರಿತಾರ್ಥರ್ ಸ್ವಪ್ರಧಾನರಾದಿ ಪ್ರಭವರ್
ಸ್ವರಪಂಕ್ತಿ ಪದಿನಾಲ್ವರ್
ಪರಿವಿಡಿಯಿಂ ಮನುಗಳಾದರಲ್ಲಿಂ ಬೞಿಯಿಂ ೮

ವ್ಯಂಜನಕ್ಕೆ

ಉದ್ಯೋತಿತ ವಿಶ್ವರ್ ಕೃತ
ವಿದ್ಯರ್ ಸೋಪ್ಮ ಪ್ರತಾಪರಖಿಲಾಂತ ಪದ
ಕ್ಯಾದ್ಯರ್ ವ್ಯಂಜನದಂತನ
ವದ್ಯರ್ ಮೂವತ್ತುಮೂವರಾದರ್ ದೇವರ್. ೯

ಸೂತ್ರಂ ೨.

ಸ್ವರದೊಳಗಮೇಕಮಾತ್ರಾ
ನಿರತಂ ಹ್ರಸ್ವಂ ದ್ವಿಮಾತ್ರಮುಂತದು ದೀರ್ಘಂ
ಪರಿವಿಡಿಯಂ ಮಾತ್ರಾತ್ರಯ
ಪರಿಗತಮಪ್ಪುದೆ ವಲಂ ಪ್ಲುತಂ ತಾನಕ್ಕುಂ ೧೦

ಉದಾಹರಣೆ :

ಮೊಕ್ಕಳ ಮೆಸೆದಿರ್ಪಿನ ಮೊಳ
ಪೊಕ್ಕುಚಿತಂ ಹ್ರಸ್ವದೀರ್ಘ ಸಹಿತಂ ಪ್ಲುತಮೆ
ಕ್ಕೆಕ್ಕೆಯೆ ನೆಗಟ್ದ್ದಿ ಮೊರ್ಪದಲೊಳೆ
ಕುಕ್ಕೂಕೂ ಎಂದು ಕೋೞಿ ಕೂಗಿದವಾಗಳ್. ೧೧.

ಸೂತ್ರಂ ೩.

ಪರಿಹರಿಸೆ ಯವರ್ಣಮನಾ
ಸ್ವರಂಗಳವು ನಾಮಿಯೆಂಬುವಕ್ಕುಂ ಸಂಧ್ಯ
ಕ್ಷರಮೆನೆ ಯಥಾರ್ಥದಿಂ ವ್ಯವ
ಹರಿಸುಗುಮೇಕಾರ ಮಾದಿಯಾಗಿರೆ ನಾಲ್ಕುಂ. ೧೨



ಅವರ್ಣನುಕ್ರಮುಪ್ರಯೋಗಂ (ನಾಮಿಗಳ್ಗೆ)

ಉಪೇಂದ್ರ ವಜ್ರ ವೃತ್ತಂ.

೧. ಅವರ್ಣವಾಚಕ್ಕೆಡೆಯೊಗದೊಳ್ಪಿಂ
ದವರ್ಣಿಕಾಪುಳ್ ಗುಣವೃದ್ಧಿ ಧಾಮರ್
ದಿವಾಕರರ್ ವ್ಯಾಕೃತಿನಾಮಿಗಳ್ವೋಲ್
ದಿವಕ್ಕೆ ಪನ್ನಿರ್ವರೆ ಮುಖ್ಯರಾದರ್. ೧೩.

(ಸಂಧ್ಯಕ್ಷರಂಗಳ್ಗೆ)

೨. ವರಸಂಧ್ಯಕ್ಷರದಂತಿರೆ
ಗುರು ದೀರ್ಘಂ ಗೂಢ ಸಂಧಿಯೆನೆ ತೋಳ್ನಾಲ್ಕುಂ
ಕರಮೆಸೆದಿರ್ಕುಂ ಪದ್ಮೋ
ದರಂಗೆ ಚಕ್ರಾಸಿ ಶಂಖ ಶಾರ್ಙ್ಗಸಮೇತಂ. ೧೪

ಸೂತ್ರಂ ೪.

ಎಯ್ದೆ ಕಕಾರದಿನಿರ್ಪ
ತ್ತ್ರಯ್ದಕ್ಕರ ಮೆಯ್ದುವನ್ನೆಗಂ ಪರಿವಿಡಿಯಿಂ
ದಯ್ದುಗೆಯ್ದು ವರ್ಣದಿ
ನಯ್ದಂ ವರ್ಗಂಗಳಕ್ಕುಮುೞಿದುವವರ್ಗಂ ೧೫

ಉದಾಹರಣೆ :

ವರ್ಗಾಕ್ಷರ ಮೆಂತಂತೆ ನಿ
ಸರ್ಗಕೃತ ಸ್ಪೃಷ್ಟಕರಣ ಮುಳವಡೆ ಹೃದಯಾಂ
ತರ್ಗತ ಮಾನುವು ಮನಸಿಜ
ಮಾರ್ಗಣಮಯ್ದುಂ ನೃಪಂಗೆ ತತ್ಸನ್ನಿಧಿಯೊಳ್. ೧೬.

### ಸೂತ್ರಂ ೫.

ಅನುನಾಸಿಕಮಕ್ಕು ಙ ಞ
ಣ ನ ಮಂಗಳೆ ಯ ವ ಲ ಮನುನಾಸಿಕಮುಂ ಮ
ತ್ತನು ನಾಸಿಕಮುಮವಕ್ಕುಂ
ಜನೋಕ್ತಿಯಿಂದಱಿವುದವಱ ವಿಷಯಾಂತರಮುಂ ೧೭.

ಉದಾಹರಣೆ : (ಅನುನಾಸಿಕಕ್ಕೆ)

೧. ಬಿಙ್ಕವೆಙ್ಕೆತ್ತಿಸೆವಞ್ಚಿಯ
ಸಙ್ಕುಳ ಮುನ್ನೊಣ್ಣುಗೆಡೆವ ಶುಕಶಾರಿಕೆಯುಂ
ಸೊಂಙ್ಕು ಬಲವನ್ನು ತೀಡುವ
ತೆಙ್ಕಣ ಗಾಳಿಯುಮದೇಂ ಮನಱ್ಕೊಳಿಸಿದುವೋ ೧೮
ಯುವ ಲಂಗಳ್ಗೆ.

೨. ಅಯ್ಯೆಸೆನೆ ಬಳ್ಕಿ ತಾವೆಂ
ದೊಯ್ಯನೆ ನುಡಿದೆಬ್ದು ಗಿರಿಜೆ ಪೋಪುದು ಮಿತ್ತೇ
ನಯ್ಯ ನವಜಲದ ಕಂಠನ
ಜಯ್ಯಾತ್ಮಂ ನೆನೆದನಮಳ ಸುರಮುನಿವರರಂ ೧೯

೩. ಶ್ರುತಿಪದ್ಧತಿವೆರಸು ಸರ
ಸ್ವತಿಗಾ ಗಾಯತ್ರಿ ವೆರಸು ಸಾವಿತ್ರಿಗರುಂ
ಧತಿ ವೆರಸು ಸಪ್ತಋಷಿಯರ
ಕುತಪಕ್ಕೇಂ ಸೇವೆ ಸಾಮರವ ಮುಖರ ಮುಖಾ. ೨೦

೪. ಕಲ್ಲೆನ್ನದೆ ಬೆಳೆದ ಪಸುೞ್
ವುಲ್ಲಂಡಾಸೆಯೊಳೆ ಸಾರ್ದು ಮರಕತ ದೊಡ್ಡುಂ
ಗಲ್ಲನೆ ಸಾಯ್ದು [1] ಮೃಗಂಗಳ್
ಕಲ್ಲನೆ ಕನಲುತ್ತಮಿರ್ಪುವೀ ಗಿರಿವರದೊಳ್ ೨೧.
(ರನ್ನನ ಅಜಿತ ತೀರ್ಥಂಕರ ಪುರಾಣ ತಿಲಕಂ : ೯. ೨೨)

೧ ಶಾರ್ಪು.



### ಸೂತ್ರಂ ೬.

ಲ ರ ಡಗ್ರಹಣದೆ ಳ ಱ ೞ
ಕ್ಷರಮುಕ್ಕುಂ ಪೀಡನ ಪ್ರಯತ್ನಾಶ್ರಯದಿಂ
ಪದೊರೆಕೊಂಡಸಂಖ್ಯೆಯೊಳಮುನು
ಕರಣದೊಳಂ ವರ್ತಿಕುಂ ಮಹಾಪ್ರಾಣಂಗಳ್ ೨೨

ಉದಾಹರಣೆ :

(ಪೂರ್ವಾರ್ಧದೊಳ್—ಳ ಕಾರಕ್ಕೆ)

೧. ಬೆಳಗುಗಳ ಬಳೆದ ಬಳಗವ
ಬಳಸುಗಳೊಳಗೊಳಗೆ ತೊಳಗಿ ಪೊಳೆಪೊಳೆ[2]ದೊಳಗು
ಚ್ಚಳಿಸಿ ತಳತಳಿಸಿ ದೆಸೆಗಳ
ನಳುಸಿರ್ದರೊಳ್ ಕೆಳರ್ದು ಮಿಳಿರ್ದತಳರ್ದತ್ತಾಗಳ್ ೨೩

(ಱ ಕ್ಕೆ)

೨. ತೊಱೆಗುಳ ಪುಳಿನ ತಳಂಗಳ
ತೆಱೆಪುಗಳರೆದೆಱೆರೆದು ಪೋಲ್ತುವೆರ್ದೆಡೆಱೆದಿರೆ ನಾ
ಣೆಱೆಕದಿನರೆದೆಱೆದೋಪಳ
ಮಿಱುಗುವ ಘನಜಘನ ತಳದ ತೆಱೆಪಿನತೆಱನಂ ೨೪

೩. ಮೊೞೆದಿರಗುವರಿಯ ಮಿಱುಗುವ
ಸರಲಂಗಱೆವಿಡಿದು ಮೊೞನೆವರಂ ನರಸೆಡೆಯೊಳ್
ಪರಿದು ಕಿಱುಕಱೆಡೆ ಕೆಂದಱೆರಿ
ಸರಲೊಳೆ ಕೊಟೆ ಕೊಱೆದು ನೆಱೆಯೆ ಕುಱುಪಱಿಡಂ, ೨೫

೨. ಥಳಗು

('ಬ' ಕ್ಕೆ)

೪. ಕಟಿಲೆ ನುಡಿದಟಿ ಬಗ್ಗಿಸಿ
ಘಟಿರಿಲೆ ನಡೆಯುಂದು ಜಡಿದು ಸಾರಥಿಯಂ ಪಾಂ
ಪಂಗಟಿದು ನಿಲ್ತಲೀಯದಲ್ಲಿಂ
ದೆಟಿಚಿದೊಯ್ಪಂ ತೊಯ್ದು ಳಾತ್ಮವರನಂ ನರನಂ. ೨೬

ಅಪರಾರ್ಧದೊಳ್-ಸಂಖ್ಯೆಗೆ

ಮಣಿವಿಭೂಷಣವೃತ್ತಂ:

೫. ನೇಸರಂ ಪೆಱಗುಮಾಡಿ ಜಯಾವಹಮೆಂಬಸಿಂ
ಬೀಸಿ ಬೆಂಬಱಿಯನೊಯ್ಯನೆ ಗಾಳಿ ರಹಾಜಿರೋ
ಧ್ಘಾಸಿ ಫಲ್ಗುಣನ ಚೋದಿಸೆ ಭೋಂಕೆನೆ ನೂಱನೂ
ರ್ಭಾಸಿರಂಗಳವೊಲಾಯ್ತು ರಥಂ ಕಡುವೇಗದಿಂ ೨೭

ಅನುಕರಣಕ್ಕೆ.

ಉತ್ಪಲಮಾಲೆ:

೬. ತ್ರ್ಯಂಬಕಲೋಚನಾರ್ಚಿಗ ವಿದಗ್ಧಳಮೆಂಬಿನ ಮೇಟ್ಗಿಯೊಳ್ ಶಿಖಾ
ಡಂಬರ ಮೆಯ್ದೆನೀಳ್ದೊಳಗುಮಾಡೆ ನಿಶಾಟರನುಂಡನಗ್ನಿ ಘು
ಮ್ಮೆಂಬ ಘಟಚ್ಚಟೆಂಬ ಧಗಯೆಂಬ ಧಗದ್ಧಗೆಯೆಂಬ ಘಟ್ಟು ಪೊ
ಟ್ಟೆಂಬ ರವಂ ಕಱುತ್ತಡಸಿ ಮೆಲ್ಪ ಸರಕ್ಕನುಸಾರಿಯಪ್ಪಿನಂ ೨೮

## ಸೂತ್ರಂ ೭.

ನಿರತಂ ಪ್ರಕೃತಿ ಪ್ರತ್ಯಯ
ಮೆರಡು ಮೊಡಂಬಟ್ಟು ತೋರೆ ಪದಮೆನೆ ಪಡೆಗುಂ
ಪರವರ್ಣದೊಳೆಳಸಿರ್ಕುಂ
ಸ್ವರರಹಿತ ವ್ಯಂಜನಂಗಳಾ ಸಂಹಿತೆಯೊಳ್. ೨೯



ಲಕ್ಷ್ಯಂ: (ಪದಕ್ಕೆ)

ಗೇಯವೃತ್ತಂ:

೧. ಇದ್ಧಂ
ಶುದ್ಧಂ
ಸಿದ್ಧಂ
ಬುದ್ಧಂ ೩೦

(ವ್ಯಂಜನಗಳ ಸಂಹಿತೆಗೆ)

ನಾಗವೃತ್ತಂ.

೨. ಎನ್ನೊಲ್ದು ಬೇಟ್ಪಿ
ದನ್ನೆಟ್ಟ ನೀ
ಗುನ್ನಾಲ್ಪ ರೆಬ್ಬ
ರುನ್ನಾಗರೊಳ್ * ೩೧

ಇದು ಶಬ್ದ-ಸ್ಮೃತಿಯೊಳ್ ಸಂಜ್ಞಾ ಪ್ರಕರಣಂ ಸಮಾಪ್ತಂ.

---

* ಎನ್ನೊಲ್ ಬೇಟ್ಪು । ದುಂ ನೆಟ್ಟನೆನಿಗೆ ॥ ನುನ್ನಾಪರೆಬ್ಬ ರುನ್ನಾಗರೊಳ್

# ೨. ಸಂಧಿ ಪ್ರಕರಣಂ

## ಸೂತ್ರಂ ೮.

ಸ್ವರಮಿರೆ ಪರದೊಳ್ ಪೂರ್ವ
ಸ್ವರಲೋಪಂ ಕೃತ ವಿಭಕ್ತಿಗಕ್ಕುಂ ಪ್ರಕೃತಿ
ಸ್ವರದೊಳುದೇದಂತಕ್ಕಾ
ಚರಿಸುವರವಿನಷ್ಟನಾಮಭಾಗಸ್ಥಿತಿಯೊಳ್. ೩೨

ಪ್ರಯೋಗಂ. ಪೂರ್ವಾರ್ಧಕ್ಕೆ.

ಸ್ರಗ್ಧರೆ.

೧. ಎನ್ನಯ್ಯಂಗಕ್ಕುಮೆನ್ನಂ ನಡಪಿದತಿರಥಂಗಕ್ಕು ಮೆನ್ನಾನೆಗಕ್ಕುಂ
ಮುನ್ನಾನೊಂ ಗಂಡನಿಂತಣ್ಮಿದ ನಿನಿತು ಭರಂಗೆಯ್ದು ನಿಂತೊಳ್ಪಿತೆಚ್ಚಂ
ತನ್ನೊಂದಾಯಕ್ಕೆ । ಮಕ್ಕಳ್ಗನಿತು ಮುನಿದನೆಂದೆಲ್ಲಮಂ
ಮೆಚ್ಚಿಸುತ್ತುಂ.[2]

ತನ್ನಂ ಪಾಯ್ವಂಬನಂಬಿಂ ಕಡಿದನೊಡನೆ ಮಾರ್ಕೊಂಡು
ಗಾಂಡಿವಧನ್ವಂ ೩೩

ಅಪರಾರ್ಧದೊಳ್ : ಉ ಕಾರಾಂತಕ್ಕೆ

ಮತ್ತೇಭ ವಿಕ್ರೀಡಿತಂ

೨. ಸೊವಡೊಂದೊಯ್ಯನೆ ಬಂದು ಪೊಯ್ಯೆ ಮುನಿಸಿಂದಾರಯ್ದು
ಕೆಂಪುಣ್ಮಿ ಪೊ
ಣ್ಮುವಿನಂ ಬಿಚ್ಚನೆ[3] ಬಿಟ್ಟ ದಿಟ್ಟಗಳಿನೆಯ್ತಂದೋವದಾವೇಗದಿಂ
ಕಿವಿಯಂ ನಿಚ್ಚಳ ಮಪ್ಪಿನಂ ತೆಱೆದು ನಿಂದೋಡೊಳೊಂದಟ್ಟೊಳ್
ತಾಗಿ ಪೋ
ರ್ಪುವು ಕಾಡಾನೆಗಳೊರ್ಮೆ ಗೊರ್ಮೆಶಬರರ್ಜೀಯಯ್ಯ
ಭಾಪ್ಪೆಂಬಿನಂ ೩೪





ಎ ಕಾರಾಂತಕ್ಕೆ

ತರಳವೃತಂ.

೩. ಪೊಗಟಿಲಾದುವು ನಾಲಗುಳ್ಳರ ಬಾಯ್ಗಳೀತನ ಚಾಗಮಂ
ಪೊಗಟಿದಿರ್ಪುವೆ ಮೆಚ್ಚದಾಂತ ಚತುರ್ಬಲಂಗಳ ಮೆಯ್ಗಳೊಳ್
ಬಗಿದಸುಂಗೊಳೆ ಸುಯ್ದು ಕೆತ್ತುವಕ್ಷಿಪುಣ್ಣ ಬಾಯ್ಗಳೆ ಬೀರಮಂ
ಪೊಗಟ್ಟೆ ಬಾಯ್ಗಳೆನಿಪ್ಪ ವಣ್ಮಿನ ಪೆಂಪು ಬೀರರ ಬೀರನಾ. ೩೫

ಅವಿನಷ್ಟ ನಾಮಭಾಗಕ್ಕೆ

೪. ಪಟುವೇಕ ವಾಕ್ಯನಮಳಂ
ದಿಟಕ್ಕೆ ಕುಡುಲಾರ್ಪ ನೆನಿಸಿದವನೀತಳದೊಳ್
ಅಟಮಟಿಗಂಗಾಳುವಿವಂ.
ಕುಟಿಲಂ ಲಂಪಟನೆನಿಪ್ಪವಂ ಮಾನಸನೇ ೩೬

## ಸೂತ್ರಂ ೯.

ಸವನಿಕುಮಾಕಾರಂ ಮೇ
ಣಿವರ್ಣಮೇಕಾರ ಮೆಂಬಿವರ್ಕೆ ಯಕಾರಂ
ವ್ಯವಧಾಯಕಂ ವೃವರ್ಣ
ಕ್ಕೆ ವಕಾರಂ ಸ್ವರಮವಿದಿರೊಳಾಗೆ ಯಥೇಷ್ಟಂ. ೩೭

ಉದಾಹರಣೆ: (ಪೂರ್ವಾರ್ಧಕ್ಕೆ—ಆ ಕಾರಕ್ಕೆ)

೧. ಆಯಿರ್ದ ಮಾಟ್ಕಿಯೊಳೆ ಪರ
ಮಾಯುಷ್ಯಾಂತಂಬರಂ ನಿರಾಕುಳವಾಗಿ
ಪಾರ್ಯಿರವಿನ ಜೈನಾಭಿ
ಪ್ರಾಯಂ ಪ್ರಾಯೋಪಗಮನದಿಂ ತೊಱೆಯಿಸಿದಂ ೩೮

(ಪಂಪನ ಆದಿಪುರಾಣ.೨ ೫೩)

( ಇ ಕಾರಕ್ಕೆ )

ಚಂಪಕ ಮಾಲೆ:

೨. ಸುರಕರಿಯಿಲ್ಲಿಯಲ್ಲದವಗಾಹಮಿರಲ್ ಬಗೆದಾರದಾ ದಿಶಾ
ಕರಿಕುಳ ಮಿಲ್ಲಿಯಲ್ಲದೆ ವಿಹಾರಿಸಲೊಲ್ಲವು ದಿವ್ಯವಾಹನಂ
ಹರವೃಷ ಮಿಲ್ಲ ಯಲ್ಲ ದುಣಲೊಲ್ಲದು ನೀರನೊರಲ್ದು ಮಾ ಮಹೇ
ಶ್ವರರೊಸೆ ದಿಲ್ಲಿಯಲ್ಲದಿರರೀ ತೆಱದಿಂ ನದಿ ದೇವತಾತ್ಮಕಂ. ೩೯

( ಈ ವರ್ಣಕ್ಕೆ )

೩. ಸ್ತ್ರೀಯೆಂಬನಾಥೆಯೆಂಬ
ನ್ಯಾಯದ ಕೊಲೆಯೆಂಬ ದುರ್ಬಲಸ್ಯಬಲಂ ರಾ
ಜಾಯೆಂಬ ವಾಕ್ಯಮಂ ಮಮೆ
ದೀಯುವತಿಗೆ ಬಾಳನಿಂತು ಕೀಱ್ಪಿದೆ ಮರುಳೇ ೪೦

(ಉವರ್ಣ-ಋವರ್ಣಗಳ ವಕಾರಕ್ಕೆ)

( ಉ ಕಾರಕ್ಕೆ )

೪. ವಿಧುವಿಲ್ಲದಿರುಳ್ ಕೆಲದೊಳ್
ವಧುವಿಲ್ಲದ ಲೀಲೆ ಮಧುರ ಮಧುವಿಲ್ಲದ ಪೂ
ದಧಿಯಿಲ್ಲದುಣಿಸದೇವುದೊ
ಬುಧರಿಲ್ಲದ ಸಭೆ ಸರಸ್ವತೀ ಮಣಿಹಾರಾ ೪೧

( ಋ ಕಾರಕ್ಕೆ )

ಮಹಾಸ್ರಗ್ಧರೆ :

೫. ಇವಳಂ ಶೃಂಗಾರ ಸಾರಂ ಕುಸುಮಶರನೆ ಮೇಣ್ ಮಾಡಿದಂ
ಪ್ರೊಲ್ಲಸತ್ಪ
ಲ್ಲವ ಪುಷ್ಪಂ ಮೇಣ್ ಬಸಂತಂ ಬಯಸಿ ಪಡೆದ ನೆತ್ತಂ
ಸುಧಾಸಾರಮಂ ಸೂ
ಸುವ ಚಂದ್ರಂ ತಾನೆ ಮೇಣ್ ಪುಟ್ಟಿಸಿದ ನತಿಜಡಂ
ಛಾಂದಸಂ ಪದ್ಮಜಂ ನಿ
ಕ್ಕುವ ಮಲ್ಲಂ ಕರ್ತೃವಾದಂದಿನಿತತಿ ಶಯಮಂ ತಾಳ್ವದೇ ೪೨
ಕನ್ನೆಯೆಂದಂ



(ಯಥೇಷ್ಟ ಗ್ರಹಣಕ್ಕೆ)

೬. ಆತನಯೆ ತೋರದೊಡೆಗಳ
ವಾತನ ನಿಡುದೋಳೆ ನಡೆಯವಾತನ ನಡೆದಲ್
ಮಾತೇನೊ ನೆಗಟ್ದ ನರನೆಂ
ಬಾತಂ ಪೆರನಲ್ಲನೀತನಾಗಲೆವೇಱ್ಕುಂ. ೪೩

(ಪ್ರಕೃತಿ ಸ್ವರಲೋಪಕ್ಕೆ)

ಉತ್ಪಲಮಾಲೆ.

೭. ಉರ್ವಿಯೊಳೆಲ್ಲಿಯುಂ ನೆಗಟ್ದ ನಾಯಕನಂ ಗುಣರತ್ನ [1] ಚಿತ್ರಗಂ
ಧರ್ವ ಕುಮಾರಿಕೋದಿತ ಯಶೋನಿಧಿಯಂ ತ್ವರಿತ ಪ್ರಯಾಣದಿಂ
ದೊರ್ವನೆ ಪೋಗಿ ಕಂಡು ಚಲದಗ್ಗಳೆಯಂ [2] ಮುಗುಟ್ದಿಂ
ಮದಿಷ್ಟಮಂ
ನಿರ್ವಿವರಸ್ತನೀ ಬಗೆಗೊಡಂ ಬಡುವಪ್ಪೊಡೆ ಪೋಗಿ ಬಾರೆನೇ ೪೪

( ಯ ಕಾರಾಗಮಕ್ಕಂ ಪ್ರಕೃತಿ ಸ್ವರಲೋಪಕ್ಕಂ)

೮. ಪೋಗದಿರೆಂದು ನೀಂ ತ ಡೆ ವೆ ಯಪ್ಪೊಡೆ
ಪೋಗೆನಮೋಘಮತ್ತ ನೀ
ಡಾಗದೆ ಬರ್ಪುದೆಂದು ನುಡಿಯಲ್ ಬಗೆವಪ್ಪೊಡೆ ಪೋಪುದರ್ಕೆ ತ
ಳ್ವಾಗದೆ ಪೋಗಲಿತ್ತುಲ ಮುಗುಟ್ಟಿರವಿಂಗೆ ನಿಮಿತ್ತ ಮಕ್ಕುಯಂ
ತಾಗದೆ ತೂಗವುಯ್ಯದೆ ಮುಗುಟ್ಟಿರವಿರಿಗೆ
ಮಿತ್ತದುಪ್ಪವೋಲ್ ೪೫

---

೧. ಗಾಂಧರ್ವಕುಮಾರ ೨. ಬಲದಗ್ಗಳೆಯಂ. ೩. ಮುರುಟ್ಟಿನದಿಂ

## ಸೂತ್ರಂ ೧೦.

ಅರಮೆ ಎಲೇ ಏ ಓಹೋ
ಅರೆ ಎಂಬ ದಿಪಾತಮುಂ ವಿಶಂಕಾಪರಮುಂ
ದೊರೆವೆತ್ತವ[4] ಧಾರಣ ಮುಂ
ಸ್ವರೂಪದಿಂ ನಿಲ್ಕುಮವಿಕೃತಂಗಳವೆಂದುಂ ೪೬

( 'ಅರಮೆ' ಗೆ )

ಪ್ರಯೋಗಂ

೧. ಅರಮೆ ಅರಲ್ದ ಬಯಲ್ದಾ
ವರಿಗಳ ಪದುವು ಗಳೊಳರಮೆ ಎಳದಳಿರ ಲತಾಂ
ತರದೊಳುಲಿದುಲಿದು ಕಾಡುಗು
ವಿರಳಪ್ಪಿನ ಮಱಸುವಿನಿಯಳಂ ಚಕ್ರಾಹ್ವಂ. ೪೭

( 'ಎಲೇ'ಗೆ )

ಮತ್ತೇಭ ವಿಕ್ರೀಡಿತಂ.

೨. ಗಗನಾಭೋ[5] ಗಮನೆಯ್ದೆ ನೀಳ್ದೊಗೆದ ಗೌರಚ್ಛಾಯೆ
ಶುಭ್ರಾಭ್ರಲೀ
ಲೆಗಡರ್ಪಾಗಿರೆ ಪರ್ವಿ ತೋರ್ಪುದಿದು ತಾಂ ಮತ್ತಾವುದಶ್ಯದ್ಭುತಂ
ಬಗೆ ಪೋಯ್ತುಗಳೆಲೇ ಇದಲ್ತೆ ತುಹಿನ ಕ್ಷೋಣೀಧ್ರದುತ್ತುಂಗ ಸಾ
ನುಗಳೊಳ್ ಭೋರೆನೆ ಬಂದು[6] ಪಾಯ್ವುದದೆ
ನೋಡಾಕಾಶ ಗಂಗಾಜಲಂ ೪೮

೪. ಕೊಂಡ. ೫. ಭಾಗ ೬. ಪಾಯುತಿರ್ಪುದಿದು—ಪೊಯ್ಯುತಿರ್ಪುದಿದು



( 'ಏ' ಗೆ )

೩. ನುಡಿದನೆ ಕಾವುದನೇ ಎರ್ದೆ
ಗಿಡದಿರು ಜವನಿಟ್ಟ ರಕ್ಕೆ ನಿನಗೀವುದನೇಂ
ನುಡಿದನೆ ಏ ಅದು ಕೆಯ್ಮದು
ನುಡಿದುದು ತಪ್ಪುಗುಮೆ ಗಂಗಚೂಡಾಮಣಿಯಾ ೪೯

(ಶ್ರವಣಬೆಳಗುಳದ ೩೮ ನೆಯ ಶಾಸನ)

( 'ಓಹೋ' ಕ್ಕೆ )

೪. ಓಹೋ ಇರಲಿಂ ಪೆಱವಱ
ಮಹಾತ್ಮ್ಯಮುಮಂಬು ನಿಧಿಯ ವಾರಿಯೆ ತನಗಂ
ತಾಹಾರಮೆಂದೊಡಿನ್ನ
ತ್ಯಾಹಿತ ಮನದೆಂತು ಪೊಗಲ್ಪುದೌರ್ವಾನಲನಾ [1] ೫೦

( 'ಅರೆ' ಗೆ )

ಚಂಪಕಮಾಲೆ.

೫. ಅರೆ ಎಡೆ ಹಸ್ತಿಶಿಕ್ಷಣ ವಿಚಕ್ಷಣರಿಂದರೆ ಅಶ್ವಶಿಕ್ಷೆಯಿಂ
ದರೆ ಉ ಟಿ ಮಲ್ಲವೇಷ ಮಹಿಪೊದ್ಧುರ ಯುದ್ಧರಸಪ್ರಿಯರ್ಕಳಿಂ
ದರೆ ಎಡೆ ಕಾರ್ಮುಕ ವ್ಯಸನಕರ್ಮಠ ಧ್ವನಿಜನ ಪ್ರವೇಕರಿಂ
ದರೆ ಎಡೆಯೊರ್ಮೆಯೊಂದು ಪರಿಯಿಂ ಪುರಬಾಹಿರ
ಮೊಪ್ಪಿ ತೋಱುಗುಂ ೫೧

( ವಿಶಂಕೆಗೆ )

೬. ಇನಿಯನೆ ಬೆಲ್ಲದಿಂದಿನಿಯ ನೀವನೆ ಆಃ ಪಿರಿದೀವ ನಿತ್ತುದಂ
ನೆನವನೆ ಚೀಃ ಅದಂ ನೆನೆಯನುಕ್ಕೆವಗೆಯ್ತುದ ಗಾಳುಗೆಯ್ದೆ ಕೂ
ರ್ಪನೆ ಕಳೆ ಕೂರನೇಳದಿಕೆ ಗಂಡು ಬಿಸುಟ್ಟನೆ ಉಃ ಬಿಸುಟ್ಟ ನಿಂ
ತಿನಿತು ವಿವೇಕವಿಲ್ಲದವನೆಟ್ಟವನಂ [2] ಬೆಲೆವೆಂಡಿರೋಲ್ವರೇ. ೫೨

೧. ಈ ಪದ್ಯಕ್ಕೆ ಪ್ರತಿಯಾಗಿ ಒಂದು ಪ್ರತಿಯಲ್ಲಿ ಒಂದೆರಡು ಮೂರು ನಾಲ್ಕು|ಯ್ದಂ ದೆಣಿಸುತ್ತಾಗಳಂತೆ ನಡೆ ತಂಯೆರ್ಪ॥ ತ್ತೊಂದಾದೊಡಾಗೆಳೋಹೋ । ಎಂದು ಗಡ ಪರಶುರಾಮನತಿ ಕುಪಿತ ಮನಂ॥ ಎಂಬ ಪದ್ಯವಿದೆ. ೨. ನೆನ್ನನುವಂ

( ಅವಧಾರಣಕ್ಕೆ )

ಉತ್ಪಲಮಾಲೆ :

೨. ಏತರ ಮಾತೋ ಭೂತಳದೊಳರ್ಥ ವಿಹೀನನ ಶೌಚಮಣ್ಮು ಪೆ
ರ್ಮಾತು ಕುಲಂ ನೆಗಟ್ತೆಯಿನಿತುಂ. ವಿಫಲಂ
ಧನಮುಳ್ಳನಾವೊನಂ
ತಾತನೇ ಶೂರನಾತನೆ ಕುಲೋದ್ಭವನಾತನೆ ಶುದ್ಧವೃತ್ತನಂ
ತಾತನೆ ಇಂದ್ರನಾತನೆ ಮನೋಭವನಾತನೆ[1] ಅಂಬುಜೋದ್ಭವಂ ೫೩

ಸೂತ್ರಂ ೧೧.

ಪದವಿಧಿಯಿಂ ನೆರೆದುತ್ತರ
ಪದತಾದಿಯೊಳೊಂದಿ ನಿಂದ ವರ್ಗಪ್ರಥಮ
ಕ್ಕದಱ ತೃತಿಯಾಕ್ಷರ ಮ
ಪ್ಪುದಕ್ಕುಂ ಬಹುಳ ಮುಱಿಯೆ ಚಟವರ್ಗಂಗಳ್. ೫೪

ಉದಾಹರಣೆ (ಕ ಕಾರವು ಗ ಕಾರವಾದುದಕ್ಕೆ)

೧. ಪಗನ್ನಡಂಬಿ ಪುದುಂಗೊಳೆ
ಕೊಱಿಸಕ್ಕದಮಂ ತಗುಳ್ಚಿ ಜಾಣ್ ಕಿಡೆ ಮುತ್ತು[2]
ಮೇಟಿಸಂ ಕೋದಂತಿರೆ ಪೇ
ಟ್ಟಿಬಿಗವಿಗಳ ಕವಿತೆ ಬುಧರ ನೆರ್ದೆಗೊಳಿಸುಗುಮೇ. ೫೫

---

೧. ಗುಹೋನ್ನತನಾತನೆ ಅಂಬುಜೋದರಂ.

೨. ಗಿಡೆ ಮುತ್ತಂ ಮೆಟಸುಂ ಗೋದಂತಿರೆ.



( ತ ಕಾರವು ದ ಕಾರವಾದುದಕ್ಕೆ )

೨. ಪಂದಲೆಯೊೞಿದೋರಣದ ಸೀಯದರಂ ಪೊಸದೂವೆದೂಪ ತೂ
ಗುಂದಲೆ ಬಾಟ್ಪಿಣಂ ಪೊಡರೆ ಬಳ್ಕುವ ಸಯ್ಮನ ಸೂಲ [1]
ಮಾಲದೊಳ್
ಸಂದಣಿಯಾಗಿ ನೇಲ್ಪ ಪೆಣನೊಂದಿರೆ ನಿಂದುರಿಯುಯ್ಯಲೇಱಿ ಕೈ
ರಂದಱಿಯಲ್ಕೆ ಮಾಡಿದಡೆ ಮಂಚಿಕೆ
ಮಿಂಚಿದುದಾಶ್ಮಶಾನದೊಳ್. ೫೬

(ಪ ಕಾರವು ಬ ಕಾರವಾದುದಕ್ಕೆ)

ಹರಿಣೀವೃತ್ತಂ.

೩. ಎಲಲದೆನಸುಂ ಕಾಮವ್ಯಾಮೋಹದಿಂದಿರೆ ನೀಳ್ದ ತ
ಣ್ಬುಲ ತಳದೊಳ್ ರುದ್ರಂ ಕಂಡಲ್ಲಿ ಕಣ್ಬೊಲನಾಗಿಕೆಯ್
ಗಱಿದಂ ಮುಳಿಸಿಂ ಪೆರ್ವಾವಾಗೆಂದು ಶಾಪಮನಿತ್ತನಂ
ದಬಲೆ ಮನದೊಳ್ ತಾಪಂ ಬೆತ್ತೆ ವಿಯೋಗ ವಿಷಣ್ಣನೆಂ. ೫೭

(ಬಹುಳ ಗ್ರಹಣಕ್ಕೆ : ಕೆಲವೆಡೆಗಳಲ್ಲಿ ಕ ಕಾರವು ಗ ಕಾರವಾಗದಿರುವುದಕ್ಕೆ)

೪. ಒರ್ಕೆಯಿಸಿ ಬಿಲ್ಲನಂಬು ಮ
ನುರ್ಕಾಳ್ಗಳ್ ಸುರಿಗೆ ಗಿಟ್ಟಿ ಕ್ಷಿಮಾಣ್ದರದಾ ಗೋ
ವರ್ಕಳದಿರ್ಚಿದ ಪೋಟಿಬಾ
[2] ಯ್ಲ ರ್ಕಳೊಳೆಕ್ಕತುಳಮಿಱಿದು ಕುಱಿದಱಿಯಾದರ್ ೫೮

(ತ ಕಾರವು ದ ಕಾರವಾಗದಿರುವದಕ್ಕೆ)

ಮತ್ತೇಭವಿಕ್ರೀಡಿತಂ.

೫. ನೆಗೆದಂಭೋದ ಪಥಕ್ಕೆ ಱಂಕೆವೆರಸೊಂದದ್ರೀಂದ್ರ ಮಾಕಾಶಮಂ
ಬಗಿದತ್ತಿರ್ಬಗಿ ಯಾಗೆ ಪಾಱಿದಪುದೆಂಬಾ ಶಂಕೆಯುಂ ಮಾಡಿ ತೊ

---

೧ ಸಮ್ಮನ ಸೂಲವಾಲದೊಳ್ ಬೊಮ್ಮನ ಸೂಲಮಾಗಲಾ ೨ ಯ್ತು.

ಟ್ಟಗೆ ತದ್ಗ್ರಾಹ[1]ಮುಮಂ ಗಜೇಂದ್ರಮುಮನೊರ್ತರ್ತೆಂಬಿನಂ।
ತುತ್ತಿ ದೇ
ವಗಣಕ್ಕಚ್ಚರಿಯಾಗೆ ಪಾಱೆ ಸುರರಾಜಾವಾಸಮಂ
ಮುಟ್ಟಿದಂ ೫೯

( ಪ ಕಾರವು ಬಕಾರವಾಗದಿರುವದಕ್ಕೆ )

**ತರಳವೃತ್ತಂ.**

೬. ನಡುವ ನಾಟಿಸ[2]ದುಂತೆ ನೋಡಿದೊಡಂ ವಳಿತ್ರಯ ಮಧ್ಯದೊಳ್
ನಡುವ ದಿಟ್ಟಿಯನಾಗದಾರ್ಗಮುಗಲ್ಚಲೆಂಬನಿ ತೊಪ್ಪುವೊ
ಳ್ಪಿಡಿಯೆ ತೀವಿ ಪೂಗಟ್ಟಿಗಾಗ [3]ಮುಳುಂಬ ಮಾಗಿಯು
ಮಂತು ಮೊ
ರ್ಪಿಡಿಯೆ ದಲ್ ನಡು ನೂತವಾತಚಲಲ್ಲತಾ
ಲಲಿತಾಂಗಿಯಾ ೬೦

(ಚಟವರ್ಗಪ್ರತಿಷೇಧಕ್ಕೆ—ಚ. ಕಾರವು ಜ ಕಾರವಾಗದಿರುವದಕ್ಕೆ)

**ಚಂಪಕಮಾಲೆ.**

೭. ಅತಿಶಯಮಾಯ್ತು ಕಾಲ್ದುಱುಗಲಿಟ್ಟಳ ಮಾಯ್ತುರಚಲ್ಲಿ
ಕೊಂದು ಕೂ
ಗಿತು ಕಟ ಚಲ್ಲಿ ಸೂಸಕದ ನೂಪುರದಬ್ಬರಮಾದುದಬ್ಬರಂ
ಮತಿಗಿಡಿಸಿತ್ತು ದಿಟ್ಟ ಸೇಱಿಗೆಯ್ದುದು ಪುರ್ವಿನೊಳಾದ
ಜರ್ವು ತಾಂ
ದ್ರುತ [4] ತರಮಾದ್ರುತಂ ಸಮೆದ ತಾಣದೊಳಾಡುವ
ಗಾಡಿಕಾರ್ತಿಯಾ ೬೧

---

೧. ತದ್ಗ್ರಾಹ ೨. ಸುವಂ. ೩. ನಾಡೆಯು ೪. ದ್ರುತ.



(ಟ ಕಾರವು ಡ ಕಾರವಾಗದಿರುವುದಕ್ಕೆ)

೮. ಕಡು ಟಕ್ಕುಗೊಂ[1]ಡವೊಲ್ ಮೆಯ್
ನಡುಗೆ ಮನಂ ವಿಕಳಮಾಗೆ ನುಡಿಗಳ್ ಮೊದಲಿಂ
ದಡಿಗಡಿಗೆ ಕಾಲ್ ತಡತಡವರೆ
ತೊಡರ್ದಳಿಪಿಂದೆಳಸಿ ನೋಟ್ಪ [2] ಮೃಗಲೋಚನೆಯಾ. ೬೨

**ಸೂತ್ರಂ ೧೨**

ಸ್ವರದಿಂ ಯ ಲ ದಿನನಾದಿ
ಷ್ಟ ರೇಫದಿಂ ಪರದೊಳಮಿರ್ದು ತೋಱೆ ಪವರ್ಗಂ
ದೊರೆಕೊಳ್ಗುಂ ವಾದೇಶಮು
ದರೆ ಉಱಿವಾಕ್ಯದೊಳ ಮನ್ವಿತಾರ್ಥದೊಳಕ್ಕುಂ[3] ೬೩

**ಪ್ರಯೋಗಂ :**

(ಸ್ವರಕ್ಕೆ —ಸ್ವರದ ಮುಂದಣ ಪ— ಬ ಕಾರಗಳು ವ ಕಾರವಾದುದಕ್ಕೆ)

**ಚಂಪಕಮಾಲೆ.**

೧. ಎಳವೆಱೆ ದಾಡೆ ಕೆಂದಳಿರೆ ನಾಲಗೆ ಮಾಮರದಳ್ಳಿ ಗೊಂಬಿನೊಳ್
ಮಿಳಿರ್ವೆಳವಳ್ಳಿ ಬಾಲಮಲರ್ದೊಂಗಲೆ [4] ಕೇಸರ ಮೆಂಬಿನಂ ಮನಂ
ಗೊಳೆ ಮಧು ಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂ.
ಗೊಳಿಸಿದುದ್ದಕೀರ ಮದ ಕೋಕಿಲ ಗರ್ಜಿತ ತರ್ಜಿತಂಗಳಿಂ ೬೪
(ರನ್ನನ ಅಜಿತ ತೀರ್ಥಂಕರ ಪುರಾಣ ತಿಲಕಂ. ೬—೨೩)
(ಸ್ವರದ ಮುಂದಣ ಮ ಕಾರವು ವ ಕಾರವಾದುದಕ್ಕೆ)

೨. ಮರವಣಿಗಂ ಬೀಣೆಗಮಂ.
ತರಮಾವುದೊ ಸುಕವಿರಚಿತ ಮೃದು ಲಲಿತ ಪದ
ಸ್ಫುರಿತ ಸರಸೋಕ್ತಿಗಂ ನಿ
ಷ್ಠುರ ಕುಕವಿಕಟೂಕ್ತಿಗಳ್ಗ ಮೇನಂತರಮೋ ೬೫

---

೧. ಗೊಂಡು ನಲ್ಮೆಯು । ನುಡಿಗೆ ಗೊಂಡವೊಲ್ । ಕೆಯ್ ನಡುಗೆ ೨. ನೋಟ್ಪ ಮೃಗಲೋಚನೆಯಂ ನೋಟ್ಪಿ ಮೃಗಲೋಚನೆಯಾ. ೩. ತಾರ್ಥಂಗಳೊಳಂ. ೪ ಲಗೊರ್ಂಚಲೆ.

(ಯ ಲಾದಿಗೆ ಯ ಕಾರದ ಮುಂದಣ ಪ ಕಾರವು ವ ಕಾರವಾದುದಕ್ಕೆ)

೩. ಸುರಿಗೆ ಶುಭಂಕರ[1] ಗತ್ತಿಗೆ
ಕರಗಂ ತಲೆಮುಂಡೆ ಮರುಳ ಬಾಯ್ವುಜ್ಜಿ[2] ಪಜಿಯಾ
ಗಿರೆ ಕಳದೊಳಿ ಜಿಯಲಿರ್ದುವು
ನೆರೆದು ನಿಶಾಚರರ ತಕ್ಕಿನೆಕ್ಕತುಳಂಗಳ್ ೬೬

(ಯ-ಕಾರದ ಮುಂದಣ ಬ-ಭ ಕಾರಗಳು ವ ಕಾರವಾದುದಕ್ಕೆ

೪. ಮೆಯ್ವೆಸದಿಂ ಕೆಯ್ವೆಸದಿಂ
ಬಾಯ್ವೆಸದಿಂ ಮಂತ್ರತಂತ್ರದಿಂದಂ ಸು[3]ಖಮಂ
ಮೆಯ್ಪಿಡೆ ವನಿತೆಗೆ ಪಡೆದಾ[4]
ಮೆಯ್ವೋಗಕ್ಕೆಳಸಿ ಸೋಲ್ವನೆಲ್ತುವೊಜಂಗಂ. ೬೭

(ಲ ಕಾರದ ಮುಂದಣ ಪ ಕಾರವು ವ ಕಾರವಂದುದಕ್ಕೆ)

ಉತ್ಪಲಮಾಲೆ.

೫. ಬಲ್ವೆಣನುರ್ಚಿ ಕೋಡೊಳಕೆ ನೆತ್ತರು ರೋಮಣಿಯಿಂ.
ನೆಲಕ್ಕೆ ಬಾ
ನಲ್ವರಿವನ್ನೆಗಂ ಪ್ರಹತ ದಿಂದಿಜುದೆತ್ತಿದೊಡಗ್ರಹಸ್ತದೂಳ್
ನೇಲ್ವ ಪೆಣಕ್ಕೆ ಪರ್ನೆಜಿಗೆ ವೈರಿಯ ನಾಲ್ಕು ಬಲಕ್ಕ ವೊಂದೆ ಬಂ
ಬಲ್ವರಿಯುತ್ತು ಮಿರ್ದುದು[5] ಜಯದ್ವಿರದಂ ಜಯಸಿಂಗ
ಭೂಪನಾ. ೬೮

( ಲ ಕಾರದ ಮುಂದಣ ಪ-ಬ ಕಾರಗಳು ವ ಕಾರವಾದುದಕ್ಕೆ)

೬. ಬಲ್ವಲಿಕೆಯಿಂದಿದಿರ್ಚಿದ
ಬಿಲ್ವಡೆ ತನ್ನೆಚ್ಚ ನಿಶಿತ ಶರ ಸಂಹತಿಯಿಂ.
ದೆಲ್ವಡಗಾಯ್ತುನಿತುಮುದೆನೆ
ಬಿಲ್ವಲ್ಮೆಯ ಮಾತ[6] ಮಾನುಷಂ ಮಾಧವನಾ ೬೯

೧. ಕರಿ. ೨ ಬಾಯ್ದೆರೆ ೩. ಶುಭಮಂ. ೪. ಪಡೆವುದು.
೫. ಮಿರ್ಪುದು. ೬. ಮಾತು.



(ಸ್ವರ-ಯ-ಲ ಕಾರೆಗಳ ಮುಂದಣ ಮ ಕಾರವು ವ ಕಾರವಾದುದಕ್ಕೆ)

೭. ಧರೆಯೊಳ್ ಬೀರದ ಪೆಂಪಿಂ[1]
ನರನಿಂದಿರ್ಮಡಿ ಬಕಾರಿಯಿಂ ಮೂವಡಿ ಭಾ
ಸ್ಕರ ಸುತನಿಂ ನಾಲ್ವಡಿ ಶಂ[2]
ಕರ ನಿಂದಯ್ವಡಿ ನೆಗಟ್ತೆಯುದಟರ ಭೀಮಂ ೭೦

(ಅನಾದಿಷ, ರೇಫಕ್ಕೆ) ಆದೇಶವಲ್ಲದ ರ ಕಾರದ ಮುಂದಣ
ಪ-ಬ ಕಾರಗಳು ವ ಕಾರವಾದುದಕ್ಕೆ)

೮. ಬೀರ್ವೆರಸು ಕಿಟ್ತು ಪಲವುಂ
ನೀರ್ವೂಗಳ ನೊಟ್ಟಿಕೊಂಡು ಬರ್ಪ ಗಜೇಂದ್ರಂ[3]
ಸೋರ್ವ ಮದಧಾರೆ[4] ಕಟದೊಳ್
ನೇರ್ವಟ್ಟಿರೆ ಸುರಕರೀಂದ್ರ ಮೆನಿಸಿದುದಾಗಳ್ ೭೧

(ವಾಕ್ಯಕ್ಕೆ. ವಾಕ್ಯದಲ್ಲಿ ಪ ಕಾರವು ವ ಕಾರವಾದುದಕ್ಕೆ)

ಪ್ರಮಿತಾಕ್ಷರವೃತ್ತಂ.

ಕಮನೀಯವಿಭ್ರಮಗುಣಾನ್ವಿತೆಯರ್
ಪ್ರಮಿತಾಕ್ಷರಾಭರಣ ಭೂಷಿತೆಯರ್
ತಮರೂರ್ಗೆ ವೋಪ ಕುಲಜಾಂಗನೆಯರ್
ಕಮಳೋದರಂಗೆ ಪಡೆದರ್ ಮುದಮಂ. ೭೨

೧. ಪಿನ ೨. ಮುರ ! ಹರ ೩. ಗಜಂ ಮುಂ ೪. ವಾರಿ.

## ಸೂತ್ರಂ ೧೩

ಯ ಲ ರಹಿತ ವ್ಯಂಜನದೊಳ್ [1]
ನಿಲೆ ಮುಂದೆ ಸಕಾರಮಲ್ಲಿ[2] ಬಹುಳಂ ಚತ್ವ
ಕೆಲಕೆಲವೆಡೆಯೊಳ್ ಜತ್ವ
ನೆಲೆಗೊಳ್ಗು ಸಂಖ್ಯೆಯಾದೊಡಕ್ಕು ಛತ್ವಂ. ೭೩

ಉದಾಹರಣೆ. (ಚತ್ವಕ್ಕೆ ಣ ಕಾರದ ಮುಂದಣ ಸ ಕಾರದ ಚತ್ವಕ್ಕೆ)
ದ್ರುತಪದವೃತ್ತ :—

೧. ನೆರೆಪೆ ತುಂಬಿಗಳನಾತ್ಮ ಮುಖೋದ್ಯತ್
ಪರಿಮಳಂ ಕಮಳ ಬಂಧುರ ಗಂಧಂ
ಪರೆಪೆ ಕೇಕಿಗಳ ತಾಂಡವಮಂ ನುಣ್
ಚರದ ತಿಣ್ಪು ಘನಘೋಷ ಗಂಭೀರಂ. ೭೪

(ಬಹುಳ ಗ್ರಹಣಕ್ಕೆ : ಸ ಕಾರವೇ ಉಳಿಯುವದಕ್ಕೆ)
೨. ಕಣ್ ಸೋಲಮನೞಿಯಂ ಪೆಱ
ವೆಣ್ ಸುರವಧು ಗೆಣೆಗೆ[3] ವರ್ಪೊಡಂ ತೊಡದಾರ್ತಂ
ಮೇಣ್ ಸುರನಕ್ಕೆಮ ಚಲದ ಪ
ವಣ್ ಸರಿ ಕೀಲ್ಸಿ[4]ಂಗೆ ವಾರವಹಿತ ಕೃತಾಂತಂ. ೭೫

(ಜತ್ವಕ್ಕೆ : ನ ಕಾರದ ಮುಂದೆ ಸ ಕಾರವು ಜಕಾರವಾದುದಕ್ಕೆ)
೩. ಕರೆವೆರಸಿದ ಪೊಸದುಗುಲದ
ತೆರಳ್ಕೆವೆತ್ತುಡೆ ಹಟತ್ಕಟೀ ಸೂತ್ರ ಪರಿ
ಸ್ಫುರಿತದೊಳಂ ಕಟ್ಟಿದ ಪೊನ್
ಜುರಿಗೆಯೊಳಂ ಜನವನೇಂ ಮನಂಗೊಳಿಸಿದ[5]ದೋ. ೭೬
(ಪಂಪನ ಆದಿಪುರಾಣ ೪–೩೬)

೧. ವ್ಯಂಜನದಿಂ. ೨. ದಲ್ಲಿ. ೩. ಗೆಣೆಯೆ ನಿಪ್ಪೊಡಂ ೪. ರೇಳ್ಪರಿಗೆ ಕೇಳ್ ಸರಿಗೆ ೫. ದನೋ.



(ಛತ್ವಕ್ಕೆ. ಸಂಖ್ಯೆಯಲ್ಲಿ)

ಮತ್ತೇಭವಿಕ್ರೀಡಿತಂ.
೪. ಪದಿನೆಣ್ಚಾಸಿರ[1] ಲೋಹವಕ್ಕರೆಯ ಜಾತ್ಯಶ್ವಂಗಳಿರ್ಛಾಸಿರಂ
ಮದಮಂ ಮುಕ್ಕುಳಿಸಿರ್ದ ದಂತಿಘಟೆಗಳ್ ಪತ್ತೆಂಟು[2]
ಲಕ್ಕಂ ರಣೋ
ನ್ಮದ ಪತ್ತಿವ್ರಜಮೆಂಬ ಸೈನ್ಯಮುದದಿಂ ಬಂದರ್[3] ಪಲರ್
ಕಾದಿ ಯೋ
ಡಿದೊಡೆ ಬ್ಬಟ್ಟದ ನಟ್ಟ ಮುಟ್ಟ[4] ಪಿಡಿದಂ[5]
ಚಾಳುಕ್ಯ ಚಕ್ರೇಶ್ವರಂ. ೭೭

(ಯ–ಲ ಪ್ರತಿಷೇಧಕ್ಕೆ ಯ–ಲ ಕಾರಗಳ ಮುಂದೆಣ ಸ ಕಾರದ ಸಹಜಸ್ಥಿತಿಗೆ)
೫. ವೀರಶ್ರೀ ವಿಜಯನ ಕೆಯ್
ಸಾಕಿ ಸುರಾಂಗ[6]ನೆಯರೊಸೆದು ಪರಸುವ ರವಮುಂ
ಭೋರೆಂದೆಱಗುವ ಕುಸುಮಾ
ಸಾರದ ಬಲ್ಸರಿಯು ಮೆಸೆದು[7] ವಂಬರ ತಳದೊಳ್ ೭೮

## ಸೂತ್ರಂ ೧೪

ಸ್ವರಮುಮರ್ದಿರೆ ಮುಂದೇಕ
ಸ್ವರದೊಳ್ ನ ಣ ಲ ಯ ಳ ಕಾರಮನಿತುಂ ಹ್ರಸ್ವಾ
ಕ್ಷರ ಪೂರ್ವಮಾಗೆ ಪೀನಂ
ಸ್ವರೂಪದಿಂ ದ್ವಿತ್ವವೃತ್ತಿಯಂ ತಾಳ್ದಿರ್ಕುಂ. ೭೯

೧. ಪದಿನೆಂಟ್ಸಾಸಿರ ೨. ಮತ್ತೆಂಟು ಲಕ್ಕಂ. ೩. ಬಂದುಪ್ಪಳಂ ಕಾದಿ ೪. ಕಟ್ಟ. ೫. ಬಡಿದಂ. ೬. ಪುರಾ. ೭. ಮೆಸೆದುದಂ.

ಪ್ರಯೋಗಂ.

(ನ-ಣ ಕಾರಗಳ ದ್ವಿತ್ವಕ್ಕೆ)

೧. ಪೊನ್ನುಳ್ಳವನೆ ಕುಲೀನಂ
ಚಿನ್ನಂ ಕಲಿ ಸತ್ಯವಾದಿಯೆನಿಸುಗು[1] ಮದಱಿಂ
ದಿನ್ನುಪೊನ್ನನೆ ಪಡೆವುದು
ಪೊನ್ನಿಂ ಸಮನಿಸುಗುಮಲ್ತೆ ಪೆಣ್ಣುಂ ಮಣ್ಣುಂ. ೮೦

(ಲ—ಳ—ಯ ಕಾರಗಳ ದ್ವಿತ್ವಕ್ಕೆ)

೨. ಕಲ್ಲೆಲ್ಲಂ ಕಿಸುಗಲ್ ಮರ
ನೆಲ್ಲಮವಿ ಮ್ಮಾವು ಬಳ್ಳಿಯೆಲ್ಲಂ ಲತೆ ಮು
ಳ್ಳೆಲ್ಲಂ ಕೇದಗೆ ಬೆಳೆಗೆ
ಯ್ಯೆಲ್ಲಂ ಫಲಶಾಲಿಯೆಂದೊಡೇ ಪೊಗಳ್ಪುದದಂ[2] ೮೧

(ಪೀನ ಗ್ರಹಣಕ್ಕೆ : ಲ ಕಾರವು ದ್ವಿತ್ವವಾಗುದುದಕ್ಕೆ)

ನವನಳಿನಿವೃತಂ.

೩. ಪುಲಿಗಳ ಮೀಸೆಯನುಯ್ಯಲಾಡಲೆನಂಜನೆಂ[3]
ಜಲಿಸಲು ಮುಟ್ಟು[4]ಯೆ ಕಾಳಕೂಟಮನೆನ್ನ ದೋ
ರ್ವಲ ಮನತಿ ಕ್ರಮಿಸಲ್ಕ ಮಾಟಿಸಿ ಬಂದನೊ
ಳ್ಗಲಿ ದಲಿವಂ ಜವನಲ್ಲಿ ಯುಂಡಿಗೆ ದಂದನೋ. ೮೨

(ಅನೇಕ ಸ್ವರನಿಷೇಧಕ್ಕೆ)

೪. ಶರಣಾರು ಮೊಳರೆ ಖಳಸಂ
ಶರಣದೊಳದವ ಟಿ ಲ ನೆಯ್ದಿ ನಮೆವರ್ಗೆಜಿನೇ
ಶ್ವರ ಧರ್ಮವೊಂದೆ ತಾನದು
ಶರಣಂ ಭವಹರಣಮಲ್ಲಿ ಸಂದೆಯ ಮುಂಟೇ ೮೩

(ಇದ ಶಬ್ದಸ್ಮೃತಿಯೊಳ್ ಸಂಧಿ ಪ್ರಕರಣಂ ಸಮಾಪ್ತಂ.)

---

೧. ಬಿನ್ನುಂ! ಮುನ್ನ ೨. ಪೊಗಱ್ದಪುದೋ. ೩. ಲಾಡಲುಂ.
೪. ಮುತ್ತಿಯೆ-ತಳ್ತಿಯೆ.

# ೩. ನಾಮ ಪ್ರಕರಣಂ

## ಸೂತ್ರಂ ೧೫

ಧಾತುವಿವರ್ಜಿದತ ಮರ್ಥೋ
ಪೇತಂ ಲಿಂಗಂ ಮಟಿಂಕೆಯದ[1]ದೊಳ್ ಎಂದಿಂ
ತೀ ತೆಱದಿಂದೇಟಕ್ಕುಂ
ಖ್ಯಾತ ವಿಭಕ್ತಿಗಳ[2]ರ್ಥಕೆ ಕಾರಕ ವಶದಿಂ

## ಸೂತ್ರಂ ೧೬

ಪರಿವಿಡಿಯ ಕರ್ತೃಕರ್ಮಂ
ಕರಣಾಖ್ಯಂ ಸಂಪ್ರದಾನ ಮ[3]ಪವಯನಾಖ್ಯಾ
ನಿರತಮುಪಾದಾನ ಮುಮಧಿ
ಕರಣಮುಮೆನೆ ಕಾರಕಂಗಳಾಱುಂ ನೆಗಟ್ಟಿಂ.[4] ೮೪

ಪ್ರಯೋಗಂ.

('ನೆಲ' ಶಬ್ದಕ್ಕೆ ಏಱುಂ ವಿಭಕ್ತಿ ಪ್ರತ್ಯಯಂಗಳ್ ಪತ್ತಿದುದರ್ಕೆ.)

೧. ನೆಲನಿದು ನೆಲನಂ ಪಾಲಿಸು
ನೆಲದಿಂ ಪುರುಳಕ್ಕುಮಾರ್ ನೆಲಕ್ಕೆಱಗದವರ್
ನೆಲದತ್ತಣಿನುಱದಿರಿಯುಂ
ತೊಲಗಿಸು ನೆಲದೆಱೆಯ ನೆಲದೊಳದ[5] ವಿಸು ಜಸಮಂ ೮೫

---

೧. ದೊಳ್ ಎಂದಂ. ದೊಳನೊಂದಿಂ ೨. ಪಕ್ಕೆ ೩. ದಯಾನಾಖ್ಯಾ.-ನಯಮುಥಿದಾ

## ಸೂತ್ರಂ ೧೭

ಅವಱೊಳ್ ದ್ವಿತ್ವಬಹುತ್ವಂ.
ಬವ[1]ರಿಸೆ ತಳ್ತಿರ್ಕು[2]ಮಲ್ಲಿ ಗಳ್ ಶಬ್ದಂ ಮ
ತ್ತವು ಸರ್ವನಾಮ ಗುಣವಚ
ನವೃತ್ತಿಯಂ ತಾಳ್ದಿ[3]ನೆಗೞ್ಗುಮವು ಬಹುಳತೆಯಿಂ ೮೭

ಪ್ರಯೋಗಂ

(ದ್ವಿ—ಬಹುವಚನಂಗಳಲ್ಲಿ 'ಗಳ್' ಶಬ್ದ ಪ್ರಯೋಗಕ್ಕೆ)

೧. ಅಲರ್ಗಣ್ ಮೀನ್ ಬೊಣರಂತಿರೆ
ನೆಲೆ ಮೊಲೆಗಳ್ ಚಕ್ರ ಯುಗಲಮಂ ತಿವಳಿಗಳು
ಚ್ಚಳಿತ ತರಂಗಂಗಳ ನಿಱು
ಸೆ ಲತಾಂಗಿಯರಂಬುಜಾಕರಕ್ಕೆಣೆಯಾದರ್. ೮೮

(ದ್ವಿ—ಬಹುವಚನಂಗಳಲ್ಲಿ 'ಗಳ್' ಶಬ್ದ ಪ್ರಯೋಗಕ್ಕೆ)

ಮತ್ತೇಭವಿಕ್ರೀಡಿತಂ.

೨. ಕಿಡಿಗಳ್ ಜಾತಿಜರಾದಿಗಳ್ಗೆ ದುರಘ[4]ವ್ರಾತಾಯುಧಕ್ಕಳ್ಕ ದು
ರ್ಕುಡಿಗಳ್ ಪುಣ್ಯದ ಬೀಡು ಬಟ್ಟ ಗುಡಿಗಳ್
ಧರ್ಮಾರ್ಥಿಗಳ್ಗಪ್ಪ ಕೆಯ್
ಪಿಡಿಗಳ್ ಜೈನಗೃಹಕ್ಕೆ ನಿಲ್ತ ಪಡಿಗಳ್ ಸಂಸಾರ ವಾರಾಶಿಯಾ
ತಡಿಗಳ್ ಶ್ರೀ ಗುಣಭ[5]ದ್ರ ದೇವರಡಿಗಳ್ ನಿಲ್ಕೆ[6]
ಹೃತ್ಪದ್ಮದೊಳ್. ೮೯

೧. ಬವಳಿಸೆ-ಜವಳಿಸೆ. ಬವರಿಸಿ. ೨. ಪೊಯ್ದು ೩. ತಾಳ್ದಿ. ತಾಳ್ದು.
೪. ವ್ರಾತಾದ್ರಿಗಳ್ಗಳ ವ್ರಾತಾಸಿಗುಳ್ಳಳ್. ೬. ಗುಣಚಂದ್ರ. ನಿಲ್ಕೆನ್ನ



(ಬಹುವಚನದೊಳ್ ಸರ್ವನಾಮ-ಗುಣವಚನಂಗಳ್ಗೆ 'ಅವು'
ಶಬ್ದಪ್ರಯೋಗಂ)

೩. ಅವು ಪಿರಿಯವು ಭಾವಿಪೊಡಿಂ
ತಿವು ಕಿಱಿಯವೆನಿಪ್ಪದಿದುವೆ ಭೇದಂ [1] ಪೆಱತಿ
ಲ್ಲವಱವಱಂತರ ಮೆನಿ[2]ಸಿದು
ವವನೀಧರ ದಣಿಯ ಪುಲಿಗಳುಂ ಬೆಕ್ಕುಗಳುಂ ೯೦

(ಬಹುಳ ಗ್ರಹಣಕ್ಕೆ ಸರ್ವನಾಮದೊಳ್ 'ಗಳ್ ಶಬ್ದ ಪ್ರಯೋಗಕ್ಕೆ)

೪. ನೀಂಗಳ ಕಾಲ್ಗರ್ಚಿದ ನೀ[3]
ರುಂ ಗಂಗೆಯ ನೀರುಮೆಂಬಿ[4]ನೀ ನಿಖಿಳಜಗ
ನ್ಮಂಗಳಕರಂ[5] ಗಳೆನೆ ಗೊ
ರ್ವಂಗಂ ಸಮನಿಸುದು[6]ವಿಂತು ನೋಂತರು ಮೊಳರೇ. ೯೧

## ಸೂತ್ರಂ ೧೮

ಪುರುಷ ಸ್ತ್ರೀವಾಚಕ ಮಾ
ಗಿರೆಯುಂ ಮತ್ತಲ್ಲಿ ಸರ್ವನಾಮಂ ಸಯ್ತೊಂ
ದಿರೆಯುಮಿರರ್ ದಿರ್ ವಿರ್ ಕಳ್
ದೊರೆಕೊಂಡನುಸರಿಸುಗಂ ಜನೋಕ್ತಿಕ್ರಮದಿಂ. ೯೨

೧. ನಿಮಗಾ । ವುವು ಮನಕೆಱುವುವೆಮ್ಮಱು । ನವನಾಯ್ಕುಳಿಗೊಳ್ಳಿಪೆಂದು
ನವರತ್ನ ಮುಮಂ. ೨. ಮೆನಿಸುವು ೩. ನೀರಂ. ೪. ಬವಂ ೫. ಪದಂ ೬. ದುದಿಂತು

ಲಕ್ಷ್ಯಂ (ಪುಂ—ಸ್ತ್ರೀ ಬಹುವಚನಂಗಳೊಳ್‌ 'ಇರ್‌—ಅರ್‌—ವಿರ್‌ ಶಬ್ದಂಗಳ ಪ್ರಯೋಗಕ್ಕೆ)

ವಸಂತ ತಿಲಕವೃತ್ತಂ.

೫. ಆರಾರ್ಗೆ ಪೆಂಡಿರೊಡವುಟ್ಟಿದರೆಂಬ ರಾರಾ
ರ್ಗಾರಾರ್ಗೆ ತಂದೆ ವಿರತಿ ಪ್ರಿಯಪುತ್ರ ರಾರಾ
ರ್ಗಾರಾರ್ಕೆ ತಾಯ್ವಿರೆರಡಿಲ್ಲದೆ ಕೂರ್ಪ ರಾರಾ
ರ್ಗಾರಯ್ಯೆ ತಾನೆ ತನಗಿಂ [1] ನೆರವಲ್ಲರಾರುಂ ೯೩

(ಪುಂ—ಸ್ತ್ರೀ ವಾಚಕ ಸರ್ವನಾಮಂಗಳೊಳಂ 'ದಿರ್‌' ಶಬ್ದಪ್ರಯೋಗಕ್ಕೆ

ಪೃಥ್ವೀವೃತ್ತಂ.

೨. ಇಪಲ್ದಿರೊಳಿವಂದಿರಂ ವಿಕೃತ ರೂಪರಂ ಕೂಡುಹಂ
ತವಶ್ಯಮನುರೂಪ ರೂಪರನೆ ಕೂಡಲೇಂ ಕೂಡದೋ[2]
ವಿವೇಕ ಮಿನಿ[3] ತೇಕೆ ಪುಟ್ಟದೊ ಪಿತಾಮಹಂಗೆಂಬ ಚಿ
ತ್ತ ವಿಭ್ರಮಮುಮಾಗಿಪರ್‌ ಸುಟಿವ ಬೇಡರಾ ಬೆಟ್ಟ[4]ದೊಳ್‌ ೯೪

(' ಕಳ್‌ ' ಅಂತಕ್ಕೆ )

ತರಳವೃತ್ತಂ.

೩. ಅಱಿಯಲಾಗದು ನೆಟ್ಟನೆಂದು ಭಸುಟ್ಟಿದಂ ನಯಮಲ್ತು ಪಾಂ
ಗ ಱಿವ ವಿಪ್ರವರರ್ಕಳಿಂ [5] ಚರರಿಂ ವಿಚಾರ ಪರರ್ಕಳಿಂ
ಪೆಱರುಮನ್ನರಿ[6] ನಿನ್ನು ಮಾರಯಿಸಿಂ ವಿದಗ್ಧರಿನೊಯ್ಯನೆ
ತ್ತ ಱಿಯಲಕ್ಕುಮೊ ಸಯ್ಪಿನಿಂ ಸಮನಿ[7] ಕ್ಕು ಮಲ್ತೆ[8] ಸಮೀಹಿತಂ ೯೫

೧. ತನಗಂ. ೨ ಕೂಡದೊಂ. ೩. ಮನಿ ೪. ಬೇಟ ೫. ವರರ್ಕಳಂ.
೬. ಮುನ್ನರ ೭. ನಕ್ಕು ೮. ಮಂತೆ.



ಸೂತ್ರಂ ೧೯.

ಅಕ್ಕುಮನುಸ್ವಾರಮುದಂ
ತಕ್ಕೆ ಸಮಂತೆಲ್ಲಿಯಾದೊಡಂ ಮತ್ತದಱಿಂ
ಮಿಕ್ಕುವಱಿೊಳ್‌ ಲೋಪಂ ತಾ
ನಕ್ಕುಂ ಪ್ರಥಮೈಕ ವಚನಮುಂ[1] ತೊಂದಕ್ಕುಂ ೯೬

(ಪ್ರಥಮೆಗೆ)

ಪ್ರಯೋಗಂ.

೧. ಬಗಿದು [2] ಪುಗಲ್ಕಿರಿದೆಲ್ಲಿಯುಂ
ಮೊಗೆದ ಮರಂ ಪೊದರು ಬಳ್ಳಿ ಗಿಡುವೆಂಬಿವಱಿಂ
ಮಿಗಿಲೆನಿಪ ಬಲ್ಲೆ ನಗಸಾ
ನುಗಳೊಳದಂತಾವ ಮೆಯ್ಯೊಳಂ ಪುದಿದಿರ್ಕುಂ. ೯೭

ಸೂತ್ರಂ ೨೦.

ಕೇವಲಮುದಂತ ಲಿಂಗದೊ
ಳಾವರ್ಜಿತ ಮುಪ್ಪ ಹೂಗಮುಂ ಗಳ್ಕಕ್ಕುಂ.
ತಾವೊಂದಿ ಬಿಂದುಗಳ್ಗು
ಧ್ಭಾವಿಸಿ ನೆಗಟ್ಟುಂಮುನಂ ಸ್ವರಂ ನಿಲೆ ಪರದೊಳ್‌. ೯೮

೧. ಮತ್ತೊಂ. ೨. ಬಗೆದು.

ಪ್ರಯೋಗಂ.

ಪೂರ್ವಾರ್ಧಕ್ಕೆ ('ನ್' ಆಗಮಕ್ಕೆ)

೧. ಪೊಂಗಳ ಸಂಗಳಿನೆಸೆವು
ತ್ತುಂಗ ಧ್ವಜತೋರಣಂಗಳಿಂ ಸೊಗಯಿಪ ಕೂ
ಟಂಗಳಿನೆಲ್ಲಂ[1] ನಾಡೆ ಮ
ನಂಗೊಳಿಪುವು ಪುರದ ರಮ್ಯಹರ್ಮ್ಯಚಯಂಗಳ್ ೯೯

ಅಪರಾರ್ಧಕ್ಕೆ : (ಅನುಸ್ವಾರದ 'ಮ' 'ನ' ಕಾರಗಳಿಗೆ)

೨. ಹರನಗವಿಂತಿದು ಲಂಕೇ
ಶ್ವರನೀ ಗಿರಿವರಮನೊತ್ತಿ ಕಿಟ್ಟಿತ್ತಿದನ
ಚ್ಚರಿವಟ್ಟು ಸುರವಿಯಚ್ಚರ
ಗರುಡೋರಗ ಸಮಿತಿ ನೆರೆದು ನಡೆ ನೋಡುವಿನಂ. ೧೦೦

## ಸೂತ್ರಂ ೨೧.

ಅವು ಪರಮಾಗಿರೆ ಲಿಂಗಾಂ
ತವರ್ಣಲೋಪಂ ಗುಣೋಕ್ತಿಗಕ್ಕುಂ ಪ್ರಾಯಂ
ಸ್ವವಿಭಕ್ತ್ಯಾದ್ಯಕ್ಷರ ಮಾ
ಗಿ ವರ್ತಿಕುಂ ಸರ್ವನಾಮದೊಳ್ ಮತ್ತದುವುಂ ೧೦೧

ಪ್ರಯೋಗಂ.

('ಅವು' ಪರವಾದಾಗ ಗುಣವಚನದ ಅಂತ್ಯಲೋಪಕ್ಕೆ)

೧. ಇನಿಯವು ವಿಷಯಸುಖಂ ನಂ
ಜಿನ ಸವಿವೊಲ್ ತತ್ಕ್ಷಣಂ ಪ್ರತಾಚರಣಂ ಮ
ರ್ದಿನ ಕಯ್ಪಿಯಂತೆ ವಿರಸಂ
ಮನಕ್ಕವೆರಡುಂ ವಿಪಾಕ ವಿಪರೀತಂಗಳ್. ೧೦೨

---

೧. ಗಳಿವೆಲ್ಲಂ. ಗಳವೆಲ್ಲಂ.



(ಪ್ರಾಯೋಪ ಗ್ರಹಣಕ್ಕೆ)

೨. ಬಂಡ[1]ಣದೊಳೆನ್ನ ನೋಡಿಸಿ
ಕೊಂಡೊಯ್ದಂ ನಿನ್ನನಾ ಸರಿತ್ಸುತನಾನುಂ
ಪೆಂಡತಿಯೆನಾದೆನದಱಿಂ
ಪೆಂಡಿರ್ ಪೆಂಡಿರೊಳದೆಂತು ಬೆರಸು[2]ವರ ಬಲೇ ೧೦೩
(ಪಂಪನ ವಿಕ್ರಮಾರ್ಜುನ ವಿಜಯ. ೧–೭೬)

## ಸೂತ್ರಂ ೨೨.

ಸ್ವರಮಿದಿರೊಳಕಾರಾಂತ
ಕ್ಕಿರೆ ನಾಗಮುಮಕ್ಕುಮಲ್ಲಿ ಪುಲ್ಲಿಂ[3]ಗ ದೊಳಿ
ನ್ನೆರಡನೆಯ ವಿಭಕ್ತಿಯನ
ತ್ತಿರಲತ್ತು ನಪುಂಸಕಕ್ಕೆ ದಾಗಮಮುಕ್ಕುಂ ೧೦೪

ಪ್ರಯೋಗಂ.

(ಪುಲ್ಲಿಂಗದೊಳ್ 'ನ್' ಆಗಮಕ್ಕೆ)

೧. ಇವನಧಿಕ ಪುಣ್ಯನೀತನ
ನವಸ್ಯ ಮೋಲಗಿಸೆ ತೀ[4]ರ್ಗುಮಭಿಮತ ಟಿವ ನಿಂ
ಭುವನ ವಿಶೇಷಕರಾರೆಂ
ದವನ ವನತ [5]ನಾದನಾ ಧರಾಧಿಪನಡಿಯೋಳ್. ೧೦೫

(ನಪುಂಸಕದಲ್ಲಿ 'ದ್' ಆಗಮಕ್ಕೆ)

೨. ಮನದಿಂ ಬೇಗಂ ಮುಟ್ಟಿದ[6]
ನನೂನಫಲಕುಸುಮ ಪಲ್ಲವ[7] ಭ್ರಾಜಿತ ಮಂ
ಬನದೊಳಗೆ ಪವನನಂದನ
ನನಿಂದ್ಯಗುಣನೆಸೆವಶೋಕಧಾತ್ರೀರುಹಮಂ.[8] ೧೦೬

---

೧. ಭಂಡ. ೨. ಕೂಡು. ೩. ದೋಳಂ । ಎರ ೪. ತೋರ್ಗು ೫. ನತನವ.
೬. ಪುಟ್ಟಿದ. ೭. ಕಿಸಲಯ ೮. ಹದಿಂ.

## ಸೂತ್ರಂ ೨೩

ಮು¹ತ್ತಾ ದ್ವಿತೀಯೆಗಂ ಮ ನ
ವೊತ್ತರಿಸಿರ್ಕುಂ ವಿಭಾಕ್ತಿಯಿಂ ನಿಧನದೊಳಂ
ಪತ್ತಿ ನಿವಿರ್ದಮರ್ದು ನಿಲ್ಕುಮು
ದಾತ್ತತೆ ಮಿಗೆ ದಂ ತೃತೀಯೆಗೇದಂತಂ ಮೆಣ್. ೧೦೭

ಪ್ರಯೋಗಂ.

(ದ್ವಿತೀಯೆಗೆ)

೧, ನೆಲನಂ ನುಂಗಲುಮಂಬುಧಿ
ಜಲಮಂ ತವೆ ತುಳ್ಕಲುಂ ಕುಲಾಚಲಕುಲಮಂ
ನೆಲೆಯಿಂ ರಿ ಟ²ಲುಂ ತಾರಾ
ವಲಿಯನುದಿರ್ಚಲು ಮೊಡರ್ಚಿದಂ ಚಕ್ರಧರಂ ೧೦೮

೨. ಹರನಗವಿಂತಿದು ಲಂಕೇ
ಶ್ವರನೀ ಗಿರಿವರಮನೊತ್ತಿ ಕಿಬ್ಬಿತ್ತಿದನ
ಚ್ಚರಿವಟ್ಟು ಸುರವಿ ಯಚ್ಚರ
ಗರುಡೋರಗ ಸಮಿತಿ ಮೆಚ್ಚಿ ತಲೆದೂಗುವಿನಂ.† ೧೦೯

---

೧. ಮುತ್ತುಂ. ೨. ನೆಗಪರ್.

† ಇದು ೧೧೦ ನೆಯ ಪದ್ಯವಾಗಿ ಮೊದಲೊಮ್ಮೆ (ಕಡೆಯ ಸಾಲಿನಲ್ಲಿ ತುಸು ವ್ಯತ್ಯಾಸವಾಗಿ) ಬಂದಿದೆ.



(ತೃತೀಯೆಗೆ)

೩. ಭಯದಿಂದಂ ಮುಳಿಸಿಂದಂ
ಸ್ಮಯದಿಂದಂ ರಾಗದಿಂದ ಮುಳಿಪಿಂದ ದು
ರ್ಣಯಮುಂ ಭಾವಿಸದೆ ಯದೃ
ಚ್ಛೆಯಿಂದೆ ನೆಗಟ್ಟಂಗೆ ತೀರ್ವ ಕಜ್ಜಮುಮೊಳವೇ. ೧೧೦

ಮತ್ತೇಭ ವಿಕ್ರೀಡಿತಂ.

೪. ಬಗೆದಂತಾಗೆ ಸುರೇಂದ್ರರಿಂ ಕ್ರಮದೆ ಕಲ್ಯಾಣದ್ವಯಂ ಜೈನದೀ
ಕ್ಷೆಗೆ ಪೂಣ್ದಕ್ಷಯ ಪುಣ್ಯನುಗ್ರ ³ ತಪಮೆಂಬುಗ್ರಾಸಿಯಿಂ ಕೂಡೆ ಘಾ
ತಿಗಳಂ ಘಾತಿಸಿ ತದ್ಯುಗಂಧರ ಮಹಾಯೋಗೀಶ್ವರಂ ತಾಳ್ದಿದಂ³
ನೆಗಱ್ದಾರ್ಹಂತ್ಯಮನೇನನೀಯದೋ ಶುಭಧ್ಯಾನೋಪಯೋಗೋದಯಂ ೧೧೧

(ಪಂಪನ ಆದಿಪುರಾಣ ೩–೮೦)

## ಸೂತ್ರಂ ೨೪.

ಅಕ್ಕುಂ ಬಹುಳ ಮುಕರಾಂ
ತಕ್ಕೆ ತೃತೀಯಾದಿ⁵ಗಳೊಳಿನಾಗನುಮಱುವೆಂ
ದಕ್ಕುಮವು ಸರ್ವ⁴ನಾಮದ
ಪಕ್ಕದೊಳಿರೆ ಮೊದಲೊಳಿರ್ದುಕಾರದ ನೆಲೆಯೊಳ್ ೧೧೨

---

೧. ದುಗ್ರ. ೨. ಪೂರ್ದಿದಂ ೩. ಗಳ್ಗಿನಾ. ೪. ನಾಮದೆ

(ಪೂರ್ವಾರ್ಧಕ್ಕೆ : 'ಇನ್' ಆಗಮಕ್ಕೆ)

ಉದಾಹರಣೆ :

೧. ಮನುವಿನ ಮಾರ್ಗಂ ಸುರಗುರು
ವಿನಱಿವು ಪವಮಾನ ಸೂನುವೊಂದಾಯತಿ ಪೆಂ
ಪಿನೊಳಿಸೆವ ಕರ್ಣನೊರ್ಸುಡಿ[1]
ತನಗವು ನಿಜಮಾಗೆ ನೆಗಟ್ದನಾ ವಿಭುವಿಳೆಯೊಳ್. ೧೧೩

(ಅಪರಾರ್ಧಕ್ಕೆ : 'ಅಱ್' ಆಗಮಕ್ಕೆ)

೧. ಅದಱಿಂದಾನೊಂದಂ ಪೇ
ಳಿದಪೆಂ ಮಾರ್ಕೊಳ್ಳದೀವು ದೆಂಬುದು ಪುದಱೊಳ್
ಪುದಿದಪುರಾಗಂ ಪೂಣ್ದಿರಿ
ತದಸ್ತುವೆಂದಿತ್ತ ನಮಳ ವಸ್ತುವನಾತಂ[2] ೧೧೪

ಸೂತ್ರಂ ನಂ. ೨೫

ಮೊದಲೊಳನುಸ್ವಾರಂ ಪೆರ[3]
ಸದಂತ ಪುಲ್ಲಿಂಗದೊಳ್ ಗೆಯುಕ್ಕು ದ್ವಿತ್ವಂ
ವಿದಿತ ನಪುಂಸಕದೊಳ್ ಪ
ಕ್ಷದಿಂ ತೃತೀಯಂ ಚತುರ್ಥಿಗಂತುಱ,[4] ದುವಱೊಳ್ ೧೧೫

ಪ್ರಯೋಗಂ

(ಚತುರ್ಥಿಗೆ)

೧. ಆತಂಗ ಮಾಕೆಗಂ ವಿ
ಖ್ಯಾತಮುಶಂ ಪುಟ್ಟಿದಂ ಕುಲಕ್ಕೆ ಚಲಕಂ

೧. ನೊಳ್ಪುಡಿ. ೨. ನಾಥಂ ೩: ವಿಶದಂತ ೪. ತುಳಿದವ ೫. ಱಿದುವ



ಭೂತಳದೊಳಾರ್ಗಮಧಿಕಂ
ನೀತಿಪರಂ ಪರಬಲಾಬ್ಧಿಗೌರ್ವ ಪ್ರತಿಮಂ. ೧೧೬

ಸೂತ್ರಂ ೨೬.

ಅತ್ತಣಿ[1] ಮೆಂದನು ಸಂಧಿಸಿ
ಯೊತ್ತಂ ಬರದಿಂ[2] ತಗುಳ್ಚುವರ್ ಪಂಚಮಿಯೊಳ್
ಬಿತ್ತರಿಸುವರ್ ತೃತೀಯಾ
ವೃತ್ತಿಯುಮಂ ಪಂಚಮೀ ಪ್ರಯೋಗದೊಳರೆಬರ್ ೧೧೭

(ಪಂಚಮಿಗೆ)

ಉದಾಹರಣೆ.

ಚಂಪಕ ಮಾಲೆ :

೧. ಕವಡಿಕೆ ಬಂದುದೋ[2] ಪಳುಬುದಟ್ಟಿದ ಳಾಳ್ದನ ನಂಟರತ್ತ[3] ಣಿಂ
ದವಡಳಮಾಯ್ತು ಪೋಯ್ತು ರವಣಂ ಪೊಲೆವಾವು
[4]ಗೆನೆಂಬ ನಾದಣಿ
ಸವಧರಿಸಲ್ಕಮಾಱಿ[5]ನೆನು[6]ತುಂ ಮಗುಳಿಪ್ದಾಡುವ[6] ನಿಲ್ಲಜಂಗೆ ಕಾಂ
ಕವಡಿಕೆ ಕೆಯ್ಯಳಿರ್ದುಮವು ಮುಂದಲೆ[7] ಯೊಳ್
ನೆಲಸಿರ್ದುವಲ್ಲಹೇ. ೧೧೮

(ಪಂಚಮ್ಯರ್ಥದ ತೃತೀಯೆಗೆ)

ಮಣಿವಿಭೂಷಣವೃತ್ತಂ.

೨. ಮುತ್ತ ಹಸ್ತಿಗಳ ಮಸ್ತಕದಿಂ ಬಿದಿರಿಂ ಫಣೀಂ
ದ್ರೋತ್ತಮಾಂಗದಿ ನಗುರ್ವಿಪ ಪಂದಿಯ ಕೋಟ್ಟಿಳಿಂ
ಪತ್ತುವಿಟ್ಟಗನಿಕುಂಜ[8] ದೊಳೊಕ್ಕೆಳ ಮುತ್ತನಾ
ಯುತ್ತು ಮಿರ್ಪ ಶಬರಪ್ರಿಯಕಾಮಿನಿಯರ್ಕಳಂ.[9] ೧೧೯

೧-೧. ನೆತ್ತನು ಬಂಧಿಸಿ । ಕು (ತು) ತ್ತುಂಬ ದದಂ. ೨. ದುಪೋಪ. ೩. ನಂಟನತ್ತ. ೪. ಸಂಬ–ವೆಂಬ. ೫. ವೆಸೂತುಂ ೬. ಮಗುಱಿದ್ದೊಡೆವ ೭, ಪೂದಲೆ. ೮. ನಿಕಾಯ ೯. ನಿಯರ್ಕಳಿಂ.

## ಸೂತ್ರಂ ೨೭.

ಆದಿವಿಭಕ್ತಿಯೊಳಂ ಸ್ವಾ
ಮ್ಯಾದಿಯೊಳಂ ಷಷ್ಠಿ ತಾನದಕ್ಕುಂ ಕೆಲರು
ತ್ಪಾದಿಸುವರ್ ಸ್ವಾಮಿತ್ವ ದೊ
ಳಾದಮು ಭೇದದೆ ಚತುರ್ಥಿಯಂ ಷಷ್ಠಿಯುಮಂ

ಲಕ್ಷ್ಯಂ

(ಷಷ್ಠಿಗೆ)

೧. ಕಿವಿಗಾದ ಸಂತಸಂ ಕ
ಣ್ಗವತರಿಸಿದುದೀಗಳೆಮಗೆ ಕಾಮಾಂಧಕಿ[1] ಗ
ಳ್ಗವ ದಾತ ಮಂತ್ರಸಿದ್ಧಿಯು
ಮವಯವದಿಂದಾಯ್ತು ನಿನ್ನ ಬರೆ ಮುರ[2] ಮಥನಾ ೧೨೧

(ಅವಲ್ಲದೆಯುಂ ಪ್ರಥಮಾರ್ಥದ ಷಷ್ಠಿಗೆ)

ಸ್ವಾಗತವೃತ್ತಂ.

೨. ತೆಂಕವಕ್ಕ[3] ದೊಳಸಂಖ್ಯ ಬಲಂ ನಿ:
ಶಂಕೆಯಿಂ ನೃಪನ ಪೇಳೆ ವಿರುದ್ಧಾ
ತಂಕನಳ್ಕುಱೆ[5] ಸು[4]ಶರ್ಮ ನೃಪಂ ವೀ
ತಾಂಕುಶ ತುಱುಗೊಳಲ್ ಪೊರಮಟ್ಟಂ[5] ೧೨೨

---

೧. ಕಾಮಂದಕಿ ೨. ಮಧು. ೩. ತೆಂಕವಂಕ ೪. ಸುವರ್ಮ
೫. ಮೆಱದುಟ್ಟಂ. ೬. ಕೆಯ್ಸಿಡಿ.



(ಸ್ವಾಮ್ಯಾದಿಗೆ ಸ್ವಾಮಿತ್ವದಲ್ಲಿಯು ಚತುರ್ಥಿ ಮತ್ತು ಷಷ್ಠಿಗಳಿಗೆ)

ಚಂಪಕಮಾಲೆ.

೩. ಮದನನ ಕೆಯ್ದುವೆಲ್ಲಿದ ನನಂಗನ ಕೆಯ್ದೊಡೆ[1] ಯೆಲ್ಲಿದಂ ವಿಲಾ
ಸದ ಕಣಿಯೆಲ್ಲಿದಂ ಚದುರ ಪುಟ್ಟಿ[2] ದನೆಲ್ಲಿಡ ನೆಲ್ಲಿದಂ ವಿನೋ
ದದ ಮೊದಲೆಲ್ಲಿದಂ ಸೊಬಗಿನಾಗರ ಮೆಲ್ಲಿದ ನಿಚ್ಚೆಯಾಣ್ಮನೆ
ಲ್ಲಿದನೆರ್ದೆ[3] ಗಾಣ್ಮನೆವರಸನೆಲ್ಲಿದನೋ ಲಲಿತಾಂಗ ವಲ್ಲಭಂ ೧೨೩
(ಪಂಪನ ಆದಿಪುರಾಣ ೩-೧೫)

(ಅಪರಾರ್ಥಕ್ಕೆ ಸ್ವಾಮಿತ್ವದಲ್ಲಿಯ ಚತುರ್ಥಿಗೆ)

ಸ್ವಾಗತವೃತ್ತಂ:

ಈತನೀ ನೆಲನನಾಳ್ವರಸಂ ಕೇ
ಳೀತನೀ ಧರಣಿಗೀಶ್ವರ ನೇಮಾ!
ತೀತನೀ ವಿಷಯ ನಾಯಕನೀ ಕೋ
ಪಾತನೀ ದೆಸೆಯ ನಾಟ್ಕದಿನಾಥಂ[4] ೧೨೪

## ಸೂತ್ರಂ ೨೮.

ಗುಣದಿಂ ಕ್ರಿಯೆಯಿಂ ನಿರ್ಧಾ
ರಣೆಯೊಳ್ ಸಪ್ತಮಿಯು ಮುಕ್ಕುಮಾದಿಯದಾಮುಂ
ತ್ರಣದೊಳ್ ನೆಗಟ್ಟ್ಗುಂ ಸಾಧಾ
ರಣದೊಳ್ ಲೋಪಂ ತದೇಕ ವಚನಕ್ಕಕ್ಕುಂ ೧೨೫

---

೧. ನೆಲ್ಲಿದ. ೨. ನೆರ್ದೆಯಾಣ್ಮ. ೩. ನಾಟ್ಕ.

ಅಪ್ಯಂ.

(ಪೂರ್ವಾರ್ಧಕ್ಕೆ ಸಪ್ತಮಿಗೆ)

**ಚಂಪಕಮಾಲೆ**

೧. ಸುರರೊಳಗೆಂತು ವಜ್ರಿ ಭಗಣಂಗಳೊಳೆಂತು ಸುಧಾಕರಂ[1] ಮಹಾ
ಗಿರಿಗಳೊಳೆಂತು ಮೇರು ಭುಜಗಂಗಳೊಳೆಂತು ಭುಜಂಗ ನಾಯಕಂ
ನರರೊಳಗೆಂತು ಚಕ್ರಿ ವಿಹಂಗಗಳೊಳೆಂತು ಗರುತ್ಮನಂತೆ ನೀಂ
ಪಿರಿಮೆ ಜಿನೇಂದ್ರ ದೇವರೊಳಗಿಂದ್ರ[2] ನರೇದ್ರ ಫಣೀಂ[3]ದ್ರ
ವಂದಿತಾ ೧೨೬

( ಅಪರಾರ್ಧಕ್ಕೆ ಸಂಬೋಧನೆಗೆ )

**ಮತ್ತೇಭ ವಿಕ್ರೀಡಿತಂ**

೨. ಚತುರಂತಕ್ಷಿತಿಕಾಂತೆ ಕೇಳ್ ಜಲಧಿ ಕೇಳ್ ಸಪ್ತಾರ್ಚಿಕೇಳ್
ತಾತ ಮಾ
ರುತ ಕೇಳ್ ಮಾರುತ ಮಾರ್ಗ ಕೇಳ್ ಪಗೆವನಂ ಕೊಂದೆನ್ನ
ಕೋಪಾಗ್ನಿಗಾ
ಹುತಿ ಮಾಳ್ಪೆಂ ಕೊಲಲಾಱದೆಂದು ತಱು ಸಂದಾನೆನ್ನ
ನಿಂದಗ್ನಿ[3] ಗಾ
ಹುತಿ ಮಾಳ್ಪೆಂ ಗಡಮೆಂದು ಪುಣ್ಣೋದ[4]ಱುದಂ
ಕೌರವ್ಯ ಕೋಳಾಹಳಂ[5] ೧೨೭

(ರನ್ನನ ಗದಾಯುದ್ಧಂ ೬–೨೩)

---

೧ ನಿಶಾ ೨–೧. ಮುನೀಂದ್ರ ನರೇಂದ್ರ ೩. ಸಂದಗ್ನಿ ೪. ದೊಳಱದಂ
೫. ಶಾಳಾನಳಂ.



## ಸೂತ್ರಂ ೨೯.

ಭಾಷೆಯೊಳೇಕತ್ವಕ್ಕ ಏ
ಶೇಷದಿನೇದಂತ ಮಲ್ಲಿ ವರ್ತಿಸುಗುಳಿರಾ
ಶ್ಲೇಷಂ ತಾನಕ್ಕುಂ ಪರಿ
ಶೇಷದ್ವಿಬಹುತ್ವ ವಿಷಯಮೆನಿತನಿತ[1]ರ್ಕಂ ೧೨೮

**ಪ್ರಯೋಗಂ**

( ಸಂಬೋಧನೆಯಲ್ಲಿ ಏಕವಚನದ 'ಏ' ಗೆ )

**ಮತ್ತೇಭವಿಕ್ರೀಡಿತಂ :**

೧. ಎಳಮಾವೇ ತಳಿರುಯ್ಯಲೇ ಕೊಳೆ ತಗುಳ್ದಿಂದೋಳಮೋ ಕೋಗಿಲೇ
ಗಿಳಿಯೇ ತುಂಬಿಯ ಬಂಬಲೇ ಪುಳಿನಮೇ ಬೆಳ್ದಿಂಗಳೇ ಚಂದ್ರನೇ
ಕೊಳನೇ ನಂದನಮೇ ಲತಾಭವನಮೇ ಸುಗ್ಗೀ[2] ಕರಂ, ಬರ್ದಿದೆಂ[3]
ಗಳ ನೀಮೆಲ್ಲರು ಮೆನ್ನ ಬರ್ದುಗೆಯನಾ ನಲ್ಲಂಗೆ
ಪೇಲ್ಬಂ ಗಡಂ.[4] ೧೨೯

(ಬಹುವಚನದ 'ಇರ' ಕ್ಕೆ)

**ಚಂಪಕಮಾಲೆ**

೨. ಸುರತರುನಂದನಂಗಳಿರ ರತ್ನಪಿನದ್ಧ ವಿಮಾನ ಕುಟ್ಟಿಮಾಂ
ತರಸುರತಾಲಯಂಗಳಿರ ಚಾರುವಿಲೋಲ ಕಟಾಕ್ಷ ಪಾತ ಸೌಂ[5]
ದರ ಪರಿವಾರ ದೇವಿಯರಿರಾ ಕಡುಕೆಯ್ದು ಕೃತಾಂತ ನಿಂತು ನಿ
ರ್ನೆರಮೋಳಿದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ
ನೋಡುತಿರ್ಪ[6]ರೇ ೧೩೦

( ಪಂಪನ ಆದಿಪುರಾಣ ೩–೪ )

---

೧. ತಕ್ಕುಂ. ೨. ಗ್ಗಿಂ. ೩. ಬಂದಿದೇಂ. ೪. ಗಡಾ. ೫. ಸುಂ.
೬. ತಿರ್ಪುವೇ. ತಿರ್ಪರೇ.

ಎಸೆದಿರೆ ನಿ[1]ಲ್ಕುಂ ಸಂಚೋ
ಧಿಸುವೆಡೆಗಳೊಳಮದುರ್ ದೇಸೆಯಿಂ[2] ಮಾರ್ಗದೊಳಂ
ನಿಸದಂ ಕ್ರಮಗತಿಯೊಳತಿ
ಪ್ರಶಸ್ತಿಯಿಂ ಹ್ರಸ್ವದೀರ್ಘಕಾಕುಗಳೆರಡುಂ. ೧೩೧

ಪ್ರಯೋಗಂ.

(ಹ್ರಸ್ವಕ್ಕೆ)

ಸ್ವಾಗತವೃತ್ತಂ.

೧. ಕೇಳಮಾಧವ ಭವನ್ಮಥಿತ ವ್ಯಾ[3]
ಲೋಳದಾನವ ಕುಲಾಂಬುಧಿ ಲಬ್ಧೋ
ನ್ಮೀಳನಂ ಭು[4]ವನ ಸಂಹೃತಿ ಮೂಲಂ
ಕಾಳಕೂಟಮೆನೆ ಪುಟ್ಟಿ[4] ನಿಶಾಟಂ[5]. ೧೩೨

(ದೀರ್ಘಕ್ಕೆ)

೨. ವಾರಣೇಂದ್ರಮಣಿ ಹೇಮವರಸ್ತ್ರೀ
ಸಾರವಸ್ತುಚಯಮಂ ಕ್ರಮದಿಂ ಕೆಯ್
ಸಾರಲಾಟಿಸು[6]ವೊಡಿಂ ತಡವಲ್ತೇ[6]
ಕಾರಣಂ[7] ಕುರುಪತೀ ನಮ[8]ಗೇಗಳ್ ೧೩೩

---

೧. ನಾಲ್ಕುಂ. ೨. ದೇಸೆಯಂ. ೩. ತಾವ್ಯಾ ೪. ಯವನ ಸಂಗತಿ. ೫-೫. ಪುಟ್ಟಿತು ಶಾಪಂ. ೬-೬. ಪುದಿಂ. ತಡನಲ್ತೇ ಪೊಡಿಂ ತಡವಂತೇಂ. ೭. ವಾರಣಂ. ೮. ಎಮ.



### ಸೂತ್ರಂ ೩೧

ಸ್ವರ ಸಂಜ್ಞಕಂಗಳ ಮದೊರ್ಂ
ದಿರೆ ಮುಂದೆವಿಕಲ್ಪದಿಂ ದ್ವಿತೀಯೆಗೆ ದೀರ್ಘಂ
ದೊರೆಕೊಳ್ಗುಮೆಲ್ಲಿಯಾನುಂ
ಪುರಾತನೋಕ್ತಿಗಳೊಳಂ[1] ತದಲ್ಲಿ ಯಥೇಷ್ಟಂ. ೧೩೪

( ದ್ವಿತೀಯೆಯ ದೀರ್ಘಕ್ಕೆ )

ಪ್ರಯೋಗಂ

ಪೃಥ್ವೀವೃತ್ತಂ

೧. ದಿವಾಕರನ ಪುಟ್ಟಪೋದ ದಿತಿಜಾಂಡ ಖಂಡಂಗಳಾ
ನವಂ ಪಿಡಿದು ಪದ್ಮಜಂ ತಗುಳೆ ಪಾಡಿ ಸಾ[2]ಮಂಗಳಂ
ಸವರ್ಷಜಲ[3] ಜಾತಿ ಗಂಧಮದ ಕೋಪ ಸತ್ತ್ವಂಗಳಾ
ನವಂ ಪಡೆದನಿಂದ್ರಜಾಲಿಗನ ಪೋಲೆ ಕಣ್ಣೊಪ್ಪಿದಂ ೧೩೫

### ಸೂತ್ರಂ ೩೨

ತುದಿಯೊಳ್ ದೀರ್ಘಾದೇಶಂ
ಪೊದಟ್ಟು[4] ಷಷ್ಠೀ ವಿಭಕ್ತಿಗರೆಬರ ಮತದಿಂ
ಪುದಿದಿರ್ಕುಂ ಕೆಲಬರ್ ಪೇ
ದದೊಳಂ ಸಂಭ್ರಮದೊಳಂ ಪ್ರಯೋಗಿಸುವರದಂ. ೧೩೬

---

೧. ಳಜೀವು ೨. ನಾ ೩. ಸವರ್ಷ ಬಲ ೪. ಪೊದಟ್ಟು.

ಪ್ರಯೋಗಂ

(ಷಷ್ಠಿಯ ದೀರ್ಘಕ್ಕೆ)

ಮಹಾಸ್ರಗ್ಧರೆ.

೧. ಮೃಡನಾ ಗಂಗಾಂಬುಧಾರಾ ಜಟಲಿತ ಜಟನಾ
ಪಾದಯುಗ್ಮಕ್ಕೆ[1] ಮುನ್ನಂ.
ಪೊಡೆವಟ್ಟಿಂದ್ರಂ ಬಿಟಿಕ್ಕೀಕೆಗೆ ಪೊಡೆವಡೆ ತನ್ಮೌಲಿರತ್ನ
ಪ್ರತಾನಂ.
ತೊಡರ್ದುದ್ಯದ್ಯೋತಿ ತಟ್ಟುತ್ತಡಿ ದಳಿಗಳವಿನ್ನೂಡಿ
ದಂತಪುವೀಗಳ್[2]
ಮುಡಿದತ್ತಿಂದ್ರಂಗಮುಗ್ರಾಸುರಬಲಮಥನೋದ್ಯೋಗ
ಯೋಗ ಪ್ರಯೋಗಂ. ೧೩೭

(ಖೇದ ಸಂಭ್ರಮಂಗಳ್ಗೆ : ಖೇದದೊಳ್ ದೀರ್ಘಕ್ಕೆ)

ಉತ್ಪಲಮಾಲೆ.

೨. ಪೊಂಬಿಸದಿಂದ ಮೆಯ್ದೆ ಸಮೆದಂತೆಸೆದೊಪ್ಪುವ ಬಣ್ಣಮುಂ ಕರಂ
ಪಂಬಲಿಸಲ್ಕೆ ತಕ್ಕವಚಱಾಗಿ[3] ಸದೋಗರ ಗಂಪು ಮಾವ ಪೂ
ವಿಂ ಬಗೆವಾಗಳಿಂತಿವಱೊಳಗ್ಗಳ ಮಾಡೊಡಮುಕ್ಕಟಾ ಮರುಳ್-
ದುಂಬಿಗಳೇಕೆ ಸಂಪಗೆಗಳೊಳ್ ಪಗೆಗೊಂಡುವೊ
ನಿರ್ನಿಮಿತ್ತದಿಂ. ೧೩೮

೧. ಪದ್ಮಕ್ಕೆ ೨-೨. ಳಿವಂ. ಸೂಡಿದಂತಕ್ಕು ಮೀಗಳ್. ೪ವಿಂ
ಮಾಡಿದಂತುಪ್ಪವೀಗಳ್, ೩. ಮಾಗಿ.



ಮತ್ತೇಭವಿಕ್ರೀಡಿತಂ.

(ಸಂಭ್ರಮದೋಳ್ ದೀರ್ಘಕ್ಕೆ)

೩. ಪುಗಿಲಂ ಕ್ರೀಡನ ಶೀಲನಕ್ಕ[1]ರಿಗನಾದಂ ಪಲ್ಲವಗ್ರಾಹಿ ವಾ
ಸುಗಿ ನಮ್ಮಾದುದನಾಗಲುಂ ನಮೆ[2]ಯುಲುಂ ಮೆಯ್ದಕ್ಕರ್ಮೋ
ತಾರ[3] ನೆಂ
ಬೆ ಗಡಾ ವೇಳೆಯೆನೆಂಬ ಡೊಂಬ[4] ನಱಿಯೆಂ ಕುತ್ತ[5]
ನೆಲಕ್ಕಿಕ್ಕಿ ದಂ
ದಗಲೆಂ ರಾಜಿಗ[6] ನಿನ್ನನೆನ್ನೊಡಲೊಳೆನ್ನೀ ಪಾಣಮುಳ್ಳನ್ನೆಗಂ ೧೩೯

ಸೂತ್ರಂ ೩೩

ಮೊದಲ ವಿಭಕ್ತಿಯೆ ವಾಕ್ಯದ
ಮೊದಲೊಳ್ ಪುದಿದಿರೆಯುಮುರು ವಿಶೇಷಣಗತಿಯಿಂ
ಪದಸಂತಾನಂ ತಾನದು
ತುದಿಯ ವಿಭಕ್ತಿಯೊಳೆ ಕಾರಕಾನ್ವಿತ ಮಕ್ಕುಂ ೧೪೦

(ವಿಶೇಷಣ ಪದದ ಪ್ರಥಮೆಗೆ)

ಪ್ರಯೋಗಂ.

೧. ಸಂಗತ ಸತ್ತ್ವರ್ ಕುರುರಾ
ಜಂಗಂ ಕರ್ಣಂಗ ಮೇಱಿಪಲ್ಕರಿದನಿದಂ
ತಾಂ ಗಡಮೇಱಿಪನೀ ಪಾ
ರ್ವಂಗಕ್ಕಟ ಮೆಯ್ಯೊಳೊಂದು ಮರುಳುಂಟಕ್ಕುಂ ೪೧
(ಪಂಪನ ವಿಕ್ರಮಾರ್ಜುನ ವಿಜಯ ೩-೬೨)

೧. ಕಗಿಲ. ೨. ಸಮೆ. ೩. ತಾರೆ. ೪. ದೊಂಬ. ೫. ಪುತ್ರಂ. ನೆಲಕ್ಕಿಕ್ಕಲೆಂ
೬. ರಾಜಿಗ ೭. ಸತ್ವಂ

(ವಿಶೇಷಣ-ವಿಶೇಷ್ಯಗಳ ವಿಭಕ್ತಿ ಒಂದೇ ಆದುದಕ್ಕೆ)

೨. ನರಪರೊಳಗೊಂದು ಕೋಟಿಯುಂ

ಮರಿ[1] ಚಾಪ[2]ಬಲಕ್ಕ ಧೀಶನಂ ದುಂದುಭಿಯಂ
ಬರಿಸಿ ಮದವರಜನೆಂದಂ[3]
ತಿರೆ ನೆಗಟಿಂದಾಹವಕ್ಕೆ ಪೇಟ್ದಂ ಬೆಸನಂ ೧೪೨

## ಸೂತ್ರಂ ೩೪

ಕಾರಕಮುಂ ಕ್ರಿಯೆಯುಂ ಕ್ರಿಯೆ
ಕಾರಕದಿಂದನ್ವಿತಾರ್ಥಮಾಗಿರ್ಪನಮು
ಧ್ಯಾರೋಪಮೆಯ್ದುಗುಂ ತತ್-
ಕಾರಕ ಗತಿಯೊಳ್ ವಿಭಕ್ತಿ ಪರಿಣತ ಮಕ್ಕುಂ. ೧೪೩

**ಪ್ರಯೋಗಂ.**

( ಆಧ್ಯಾರೋಪಕ್ಕೆ )

**ಚಂಪಕಮಾಲೆ.**

೧. ಅಮೃತದ ಕಂಡ ಸಕ್ಕರೆಯ ಕೂಟಮುಮೊಲ್ವಳ[4] ಕೂಟಮುಂ
ಸಮಾ
ನಮೆ ವಲಮೊಲ್ಲದಳ್ಗೆ ವಿಟ[5]ನೇಟ ವಿಟಂ ಬರೆಕೂಟಮಿಂಪನೀ
ಗುಮೆ ಬೆಲೆಗೊಂಡೆನಾ[6] ಬೆಲೆಗೆ ಮೆಯ್ವಲೆ ಮೆಯ್ ನಿನತಿತ್ತೆ[7]ನೆಂಬ
ಕೂ
ಟಮನದನೊಂದು ಕೂಟಮೆನಲಕ್ಕುಮೆ ನಂಜಿನ
ಕಾಳಕೂಟಮಂ ೧೪೪

---

೧. ದರಿಂ. ಮರಿ ೨. ಬಲಕ ಮಧೀಶನಂ ಬಲಕ್ಕ ಮಧಿಕನಂ. ೩. ಬರಿಸಿದುದ ವರಜನೆಂದಂ. ೪. ಮೋಪಳ ೫. ನಾಟವಿಟಂ ಬರೆಕೂಟ ೬. ಗೊಂಡನಾ ೭. ನಿನಗಿತ್ತೆ.



೨. ಪಿಡಿಯೆ ಮೆಲಲ್ ಪಿಡಿಸ್ಯಕ್ವದೊ
ಳಡಸಿದ ಪಲ್ಲವಕೆ ಪಲ್ಲಮುಱಿ ನಿಳ್ಕುವುದುಂ
ಕಡೆಗಣ್ಣೊಳ್ ಕಂಡೊಂದಿಭ
ಮುಡಿದಿತ್ತುದು ಸಾರ್ದ್ರಸಲ್ಲಕೀ ಪಲ್ಲವಮಂ ೧೪೫

(ವಿಭಕ್ತಿ ಪರಿಣಾಮಕ್ಕೆ)

**ಮತ್ತೇಭವಿಕ್ರೀಡಿತಂ**

೩. ಅಸುಹೃತ್ಸೇನೆಗೆ ಸಾಲ್ವನೊರ್ವನೆ ಗಡಂ ರುದ್ರಾವತಾರಂ ಗಡಂ
ನೊಸಲೊಳ್ ಕಣ್ ಗಡಮೆಂದು ನಚ್ಚಿ ಪೊರೆದೆಂ ತಾನಕ್ಕೆ
ತಮ್ಮಮ್ಮನ
ಕ್ಕಿಸಲಂಬಂ ತಿರುವಾಯ್ಗೆ ತಂದಱಿವರೇ[1] ತಮ್ಮಿರ್ವರುಂ[2]
ಕೆಯ್ದುವಂ
ಬಿಸುಟರ್ ಜೋಳದ ಪಾೞಿಯಂ ಬಗೆದ[3]ರಿಲ್ಲಾ
ದ್ರೌಣಿಯುಂ ದ್ರೋಣನುಂ.[4] ೧೪೬

(ರನ್ನನ ಗದಾಯುದ್ಧಂ. ೨-೧೭)

## ಸೂತ್ರಂ ೩೫

ಜಾತಿಯೊಳಂ ಸಂಖ್ಯಾನಾ[5]
ಖ್ಯಾತಿಯೊಳಂ ಕೂಡಿ ನೆಗಳಲ್ಗು ಮೇಕ ಬಹುತ್ವೋ
ದ್ಯೋತನಪರಮೇಕತ್ವಂ
ಮಾತೇಂ ಭಾವದೊಳಮೇಕವಚನಮೆ ಅಕ್ಕುಂ. ೧೪೭

---

೧. ದಂದವರಿದಂ ೨. ತಾಮಿರ್ವರುಂ. ೩. ಬಗೆದುದಿ, ೪. ದ್ರೋಣನುಂ. ದ್ರೌಣಿಯುಂ. ೫. ನು.

ಪ್ರಯೋಗಂ.

( ಜಾತಿಗೆ )

೧. ಕರಿಯಿವು[1] ಕರಿಯಲ್ಲಿವು ಗಿರಿ
ಗಿರಿಯಲ್ಲಿವು ಕರಿ[2] ಕರೀಂದ್ರಮಲ್ಲಿವು ಗಿರಿ ಪೋ
ಕರಿಗಿರಿಯೆಂದಿನಿಸಪ್ಪೊಡ
ಮರಣ್ಯದೊಳಗಱಿಯಲಾಗ ಕರಿಯಂ ಗಿರಿಯಂ ೧೪೮

(ಸಂಖ್ಯೆಗೆ)

೨. ದೆಸೆ ಪತ್ತು ಜಲಧಿ ನಾಲ್ಕಾ
ಗಸವೊಂದು ಕುಲಾದ್ರಿಯೇೞ್ ತಾವೆನೆ ಮತ್ತೀ
ವಸುಧಾ ಮಧ್ಯದೊಳೆತ್ತಲ್[3]
ಮಿಸುಕುವನಿನ್ನೆತ್ತಲುೞಿವ ನಹಿತ ಕ್ಷಿತಿಪಂ ೧೪೯

(ಭಾವಕ್ಕೆ)

೩. ನಡುವಣ ಕರ್ಪುಂ ಕಡೆಯಣ
ಕಡುವೆಳ್ಪುಂ ತುದಿಯ ಕೂರ್ಪುಮೆಸೆದಿರೆ ವಿಟರಂ
ಬಿಡದಿಸಲೆ ತೆಗೆದ ಮದನನ
ನಿಡಿಯ[4]ಲರ್ಗಣೆ ಗಳನೆ ಪೋಲ್ತುವಾಕೆಯ ಕಣ್ಗಳ್ ೧೫೦

೧. ಯಿವು. ೨. ವರಂಗಳಲ್ಲಿವು ಕರಿಪೋ । ಗಿರಿವರ. ೩. ಳೆತ್ತಲು. ೪. ನಿಡಿದ.



(ಸಂಖ್ಯಾ ಜಾತಿವ್ಯತ್ಯಯಕ್ಕೆ)

ಸ್ವಾಗತವೃತ್ತಂ.

೪. ಸಂತಮಿ[1]ರ್ಪುದೆ ನವಗ್ರಹ ಮಾಶಾ
ದಂತಿಗಳ್ ಪದುಳಮೇ ದಿವದೊಳ್ ನಿ
ಶ್ಚಿಂತ ಮಿರ್ಪರೆ ಸುರರ್ ದಿತಿಪುತ್ರಾ
ಕ್ರಾಂತಿ[2]ಯಿಲ್ಲ ವಲಮೆಂಬುದು ಮಾಗಳ್. ೧೫೧

## ಸೂತ್ರಂ ೩೬.

ನೀನಾಂ ತಾನೆನಿಕುಂ ಪ್ರಥ
ಮಾನಿರ್ದೇಶಕ್ಕೆ ನಿನಗೆ ಯೆನಗೆ ತನಗೆಯೆಂ
ಬೀ ನುಡಿ ಚತುರ್ಥಿಯೊಳ್ ಸಲೆ
ತಾನಕ್ಕುಂ ಯುಷ್ಮದಸ್ಮದನ್ಯೋಕ್ತಿಗಳೊಳ್ ೧೫೨

ಉದಾಹರಣೆ ('ಆಂ, ನೀಂ, ತಾಂ,' ಗಳ್ಗೆ)

೧. ಆನುಂ ದುಶ್ಶಾಸನನುಂ
ನೀನುಂ ಮೂವರೆ ದಲಾತನುಂ ಕಟ್ಟಿದ ಬೞಿ
ಕ್ಕಾನುಂ[3] ನೀನೆ ದಲೀಗಳ್[3]
ನೀನು ಮಗಲ್ದತ್ತಪೋದಯಂಗಾಧಿಪತೀ ೧೫೩

(ರನ್ನನ ಗದಾಯುದ್ಧಂ ೫-೧೧)

೧. ಮಿರ್ಪುವೆ. ೨. ಕ್ರಾಂತಿಯಿಲ್ಲ. ೩-೩ ನೀನೇಕಲಿಗಳ್

೨. ತಾನೆ ಗಡಳಿಪ[1] ಮೂರ್ಖಂ
ತಾನೆ ಗಡಂ ತೊಡರ್ದು ಮುಡಿಗೆಗಂ ಬೋ[2]ವಕ್ಕಂ.
ತಾನೆ ಗಡ ಬರ್ಪನೆನಿಸುವೊ
ಡಾ ನರ[3]ನಯ್ದಾಱು ದಿವಸಮಂ ಬಟ್ಟಿಪನೇ[3] ೧೫೪

ದ್ರುತವಿಲಂಬಿತವೃತ್ತಂ

೩. ಎನಗೆ ಕೂರ್ಪುದನಾ ಘಟಸಂಭವಂ
ನಿನಗೆ[4] ಕೂರನಬಿಲ್ಕೆ ನಿನತಲ್ತು[5] ಕೇ
ಳೆನತು ಮಾಜಿದ[6] ಶೋಕಮನಿರ್ವ[7]ರುಂ
ಮುನಿವರಂ ತವೆ ಕೊಂದೊಡ ನೀಗುವಂ[8] ೧೫೫

(ಪಂಪನ ವಿಕ್ರಮಾರ್ಜುನ ವಿಜಯ ೧೨-೩೭)

೪. ತನಗೆ ನೋಗನಿಸೆಂಬನಿತಾದೊಡಾ
ವನುಮನಾವನು ಮೊಲ್ಗುಮೆ ಮೆಚ್ಚಲಂ
ತಿನಿತು ಮೆಚ್ಚದರಿಲ್ಲ ಮನೆನ್ನೆಮೆಂ
ದನಿತಱಿಂ ಪಟು ಸಾರ್ಗುಮೆ ಗಂಡರಂ ೧೫೬

## ಸೂತ್ರಂ ೩೭

ಅವನಾತನೆಂಬ ಮಾತುಗ
ಳವು ಪುಲ್ಲಿಂಗ ಪ್ರಯೋಗದೊಳ್ ಸ್ತ್ರೈಣದೊಳಿ
ನ್ನವಳಾಕೆಯೆಂಬ ನುಡಿ ಸಂ
ಭವಿಕುಂ ಶೇಷದೊಳದೆಂಬ ಮಾತೆಸೆದಿರ್ಕುಂ ೧೫೭

೧. ಗಳಿಪಪಂ ೨. ಜೋ ೩-೩ ನವನೈದಾರು ದಿವಸದೊಳ್ ಬಂದಪನೇ ೪-೫. ಕೂರನೆದಲ್ನಿನಗಿತ್ತ, ೫. ಳೆನಿತು ೬. ಮಾಜದ ೭. ನಿರ್ವೆಮುಂ. ೮. ಕೊಂದೊಡೆ ನೀಗುವೆಂ. ೯. ಮಾತೊಂದಿ.



ಪ್ರಯೋಗಂ.

('ಅವಂ-ಆತಂ-ಅವಳ್-ಆಕೆ' ಗಳ್ಗೆ)

೧. ಅವನಾಕೆಯನಂತಾತನ
ನವಳು ಮಗಲ್ದೊಂದು ಪೊಟ್ಟು ಮಿರಲಾಱಿರ್ ಕೂ
ರ್ಪವರನಿತುವರೆಗಮಾರೆನೆ
ಭವಾಂತರ ಸ್ನೇಹಮುವರೊಳಾದುದಳುಂಬಂ. ೧೫೮

('ಅದು' ಗೆ)

ಚಂಪಕಮಾಲೆ :

೨. ಅದು ಸುಖದೊಂದು ಪಿಂಡಮದು ಪುಣ್ಯದ ಪುಂಜಮದಂಗಜಂಗೆ ಬಾಳ್-
ಮೊದಲದು ಚಿತ್ತಜಂಗೆ ಕುಲದೈವ ಮದಂಗಜ ಚಕ್ರವರ್ತಿಗೆ
ತ್ತಿದ ಪೊಸವಟ್ಟೆಮಂತದು ಮನೋಜನ ಕೆಯ್ಪಿಡಿಯೆಂದೆ[1] ಮಾಣ್ದಿನಾ[2]
ಸುದತಿಯ ರೂಪನಿಂ ಪೆಱತನೆಂದೊಡೆ ಚಿಃ ಕರಮೆಗ್ಗ ನಾಗನೇ[3] ೧೫೯

(ಪಂಪನ ಆದಿಪುರಾಣ. ೨-೭೪)

## ಸೂತ್ರಂ ೩೮

ನಿತ್ಯಂ ನಪುಂಸಕತ್ವಮ
ಪತ್ಯಕಲತ್ರಾದಿ ಶಬ್ದದೊಳ್ ಸ್ತ್ರೀಪುಂಸ
ವ್ಯತ್ಯಯಮುಕ್ಕುಂ ಕರುಣೋ
ಪತ್ಯಕೆಗಳೊಳಂ ವಧಾ[4]ಭಿಲಾಷಾದಿಯೊಳಂ. ೧೬೦

೧. ಯೆಂದು ೨. ಮಾಣ್ಬೆನಾ. ೩. ನಾಗನೇ ೪. ತಥಾ.

ಪ್ರಯೋಗಂ

( 'ಅಪತ್ಯ' ಶಬ್ದಕ್ಕೆ )

೧. ತದಪತ್ಯಂ ಚಾಗದ[1] ಪೆಂ
ಪೊದವಿರೆ ನೆಗೞ್ದಳ್ ಜಗಕ್ಕೆ ವಿನಯಗುಣೈಕಾ
ಸ್ಪದೆ ಸುಗ್ಗಿಯಬ್ಬೆ ತನಗೊಂ
ದಿದ ಚಾಗವೆಡಂಗಿಯೆಂಬ ಪೆಸರೆಸೆವಿನೆಗಂ ೧೬೧

( 'ಕಲತ್ರ' ಶಬ್ದಕ್ಕೆ )

೨. ಸರಸತಿಗಂ ಸಿರಿಗಂ ಮ
ಚ್ಚರಿಸುವ ವಿದ್ಯಾವಿಶೇಷ ವಿಭವೋನ್ನತಿಯಿಂ
ಸುರಮಾನವ ಲಲನೆಯರೇ[2]
ದೊರೆಯರು ಮಾ ನೃಪಕಲತ್ರವಂ ಪೋಲ್ತಪರೇ ೧೬೨

( ಆದಿಗ್ರಹಣಕ್ಕೆ )

ಉತ್ಪಲಮಾಲೆ.

೩. ಒರ್ವಳೆ ಪೆರ್ಗಗಳ್ ಬಗೆವೊಡಿನ್ನೆಮಗೀಕೆಯೆ
ಗಂಡುಗೂಸು ತಾಂ.
ಸರ್ವಕಲಾವಿದಗ್ಧೆ ಪೆಱತೇನೊ ಸರಸ್ವತಿಗತ್ತಮತ್ತೆ ಪ
ನ್ನಿರ್ವರಲಗ್ಗಳಂ ಶ್ರುತದೊಳಾದೊಡ ಮೇನಿನಿ ಸೂನ
ಮುಂಟು ಗಾಂ
ಧರ್ವಮನೊಂದುಮಂ ನೆಱೆಯೆ ಕಲ್ಲಳೆ
ಕಲ್ಪಿಪುದಂತದಂ ನೃಪಾ ೧೬೩

೧. ಭಾವದ ೨. ಯುರೀ.



ತರಳವೃತ್ತಂ.

( ಅಪರಾರ್ಥಕ್ಕೆ )

೪. ಕರುಣದಿಂ ಮೃಗಮಂ ನಿಜಾಂಕ[1]ದೊಳಿಟ್ಟೊಡಾ
ಕಱೆಯಾದೊಡೀ
ಧರೆ ಮೃಗಾಧಿಪನೆಂದುದಿಲ್ಲ ಮೃಗಾಂಕನೆಂದುದು ಚಂದ್ರನಂ
ಕರುಣಮಿಲ್ಲದ ಸಿಂಗಮಂ ಮೃಗರಾಜನೆಂದುದು ಭೂಪರೊಳ್
ಧರೆಗಧೀಶ್ವರನಕ್ಕುಮೇ ಪರಚಕ್ರ ಕರ್ಕಶನಲ್ಲದಂ ೧೬೪

ಮತ್ತೇಭವಿಕ್ರೀಡಿತಂ :

೫. ಎಳನೀರೊತ್ತಿನೊಳೊತ್ತಿ ಬರ್ಪಪೊನಲೊಳ್ ಸಾಂದ್ರೇಂದು
ಕಾಂತೋಪಳೋ
ಚ್ಚಳಿತಾಚ್ಛಾಚ್ಛಜಳಪ್ರವಾಹ ಭರದೊಳ್ ಮಂದಾನಿಳಾಂದೋಳನಾ
ಕುಳಿತಾ[2]ರಾಮಫಳಾಮೃತೋಪಮರಸ ಸ್ರೋತಂಗಳೊಳ್
ಸಾಲ್ವಿನಂ
ಬೆಳೆದೋರಂತೊಱಗಿರ್ದ[3] ಶಾಳಿವನದಿಂ ಸೇವ್ಯಂ
ನಗೋಪತ್ಯಕಂ ೧೬೫

(ಪಂಪನ ಆದಿಪುರಾಣ ೧-೬೪)

೬. ಅವಳುಮನೊಲಿಸಿ ಕಂಟಿಸಿ
ಗೋವರ[4] ಗುಗ್ಗುರಿಗೆ[5] ಮಾಡಿಯುಂ ತಣಿಯರ್ ಪೆ
ರ್ಮಾವುಲಿಗನಯೋ[6] ಪೇೞಿಂ[7]
ಸ್ತ್ರೀವಧೆ ನಿನಗಶ್ವಮೇಧಮೋ ಸಂಬಳ[8]ಮೋ ೧೬೬

೧. ನಿಜಾಂಗ. ೨. ಕಳಿತಾ, ೩. ತೊಸೆದಿರ್ಪ. ತಿಸೆದಿರ್ಪ. ೪. ಗೊವರು.
೫. ಗುಗ್ಗರಿಕೆ ೬. ನೇಯೋ; ನೇಯಂ. ೭. ಪೇೞಿಂ. ೮. ಸಂದಿಳ.

**ಪುಷ್ಪಿತಾಗ್ರವೃತ್ತಂ :**

೭. ಎನಗದಱಭಿಲಾಷೆ ತಾನದೇನುಂ
ಮನದೊಳಗಿಲ್ಲ ವಿವೇಕಶೂನ್ಯನಾದಂ
ತನಗನುಚಿತ[1]ಮಪ್ಪುದೊಂದ[1]ಕೃತ್ಯ
ಕ್ಕೆನಿತುವರಂ ಬಗೆದಂದನೂಹೆಯಿಂದಂ . ೧೬೭

(ಗ್ರೀವಾದಿಯೊಳ್ ವಿಕಲ್ಪಕ್ಕೆ : ಗ್ರೀವ ರೂಪಕ್ಕೆ)

**ಶಾರ್ದೂಲವಿಕ್ರೀಡಿತಂ.**

೮. ಕೈಲಾಸಾದ್ರಿಯನೆತ್ತಿ ನೊಂದ ಭುಜಸಂದೋಹಂ[2]ಗಳಂ ಕೃಷ್ಣಕೀ
ಲಾಲಂ ಸೋರ್ವಿನಮೆಯ್ದೆ ನೀಳ್ದನಿತುವಾ ಗ್ರೀವಂಗಳಂ ರಾಗದಿಂ
ನೀಲಗ್ರೀವನಳುಂಬಮಪ್ಪ ದಯೆಯಿಂದಂ ನೀವಿ ರಾಗಾಬ್ಧಿಕ
ಲ್ಲೋಲಂ ಪೆರ್ಚೆ ದಶಾನನಂಗೆ ಸಿರಿದೊಂದುತ್ಸಾಹ[3]ಮಂ ಮಾಡಿದಂ ೧೬೮

( 'ಗ್ರೀವೆ' ರೂಪಕ್ಕೆ )

೯. ಗ್ರೀವೆ ಮೊಗಮುಂಸಮಳಿಕಂ
ಭ್ರೂವಕ್ಷಂ ತೋಳ್[4] ತೊಳಂಕು ತೊ[4]ಡೆಯೆಂಬೆಡೆಯೊಳ್
ಶೀವಿದುವು ಭೀಮನಿಸೆ ವಿಶಿ
ಖಾವಲಿವಾಜಾಂತರಾತಿ ಸೇನೆಯ ಮೆಯ್ಯೊಳ್. ೧೬೯

ಸೂತ್ರಂ ೩೯.

ಆ ಕಾರಕ್ಕೆ ಲಘೂಕೃತ
ಮೇ ಕಾರಂ ಬಹುಳ ಮಕ್ಕು ಮೀದೂದಂತ

೧-೧. ಮುಪ್ಪೊಡಂಪ. ಮುಪ್ಪುದೊಂದು ೨. ಗಳಿಂ ೩. ದುದ್ವಾಹ. ದಾಹ್ಲಾದ
೪. ತೋಳ್ಸಳೆರಡು



ಕ್ಕೇಕಾಕ್ಷರ ಪದಮುೞಿಯೆ ನಿ
ರಾಕುಳದಿಂ ಹ್ರಸ್ವಮಕ್ಕು ಮೆಲ್ಲೆಡೆಗಳೊಳಂ ೧೭೦

**ಪ್ರಯೋಗಂ**

( ಅಂತ್ಯ 'ಅ' ಕಾರವು 'ಎ' ಕಾರವಾದುದಕ್ಕೆ )

೧. ಧರೆಯಂ ಕ್ಷಮೆಯಿಂ ಹಿಮವದ್–
ಗಿರಿಸುತೆಯಂ ಪೆಂಪಿನಿಂ ಸುರಾಪಗೆಯಂ ಬಿ
ತ್ತರಿಸುವ ಜಸದೆಸಕದಿನನು
ಕರಿಸುವಳಾ ಕಾಂತೆ ಕಾಂತಿಯಿಂ ಶಶಿಕಳೆಯಂ ೧೭೧

( ಬಹುಳ ಗ್ರಹಣಕ್ಕೆ )

**ಮತ್ತೇಭವಿಕ್ರೀಡಿತಂ.**

೨. ಕಮಲಂಬೊಲ್ ಮೊಗಮುತ್ಪಲಂಬೊಲಲರ್ಗಣ್ ಚಕ್ರಾಹ್ವಯಂಬೊಲ್ ಕುಚಂ
ಭ್ರಮರಂಬೊಲ್ ಕಚಮಿಕ್ಕು ಚಾಪದಳಿನೀ ಜ್ಯಾಯಂತೆ ಪೊಲ್ ಬಾಸೆ ಕ
ಣ್ಗಮರ್ದಿಂಬಾಗಿರೆ ಲಕ್ಕಸೂೞ್ ಪರಸುತುಂ ಶ್ರೀಗಾತ್ರ[1] ವಸ್ತ್ರಾಪಮೋ
ಹಿಯರ್ ದೈವದಗಣ್ಯ ಪುಣ್ಯವಧುವರ್ ಸೇಸಿಕ್ಕಿ ಬಂದಾಡಿದರ್ ೧೭೨

(ಅಂತುಮಲ್ಲದೆಯುಂ)

೩. ಉದಯಾಸ್ತೋನ್ನತ ಶೈಲಸೇತು ಹಿಮವತ್ಸುತ್ತಿಳ ಪರ್ಯಂತಸಂ
ಪದೆಯಂ ವಾರ್ಧಿತರತ್ತ ರಂಗನಿನದತ್ಕಾಂಚೀ ಕಳಾಪಾಂಚಿತಾ
ಸ್ಪದೆಯಂ ಸಾಧಿಸಿ ಕಬ್ಬಿಗಂಗೆ ನೆಲನಂ[2] ನಿರ್ವ್ಯಾಜದಿಂದಂ ನಿಪಿ
ರ್ಚಿದ ಗೆಲ್ಲಂ ಭುವನೈಕರಾಮುವಹಿಪಂಗಕ್ಕುಂ ಪೆಱರ್ಗಕ್ಕುಮೇ ೧೭೩

೧. ಗೋಚ ೨. ವಲಂ

(ಅಪರಾರ್ಥಕ್ಕೆ : 'ಈ–ಊ' ಕಾರಗಳ ಹ್ರಸ್ವಕ್ಕೆ)

ಅನವದ್ಯವೃತ್ತಂ.

೪. ಮದನ ವಿಭ್ರಮ ಲಕ್ಷ್ಮಿಗೆ ಮೂಲಂ ವಾಗ್ವಧುಗಾಯತಿ ಲೀಲೆಗಾ
ಸ್ಪದ ಮಳುರ್ಕೆಗೆ ತಾಯುರು ಸೌಭಾಗ್ಯಕ್ಕೆ ವಿಳಾಸ ನಿಕೇತನಂ
ಮದಗಜಾಲಸಗಾಮಿನಿ ತಾನಾ ಕಾಮಿನಿ ಗೋಮಿನಿಯಿಂ
ಮಿಗಿಲ್
ಚದುರ ಪಾಟಿಯ ಸೀಳದ ಪೆಂಪಿಂದಾ ಸತಿಗಾರ್ ದೊರೆ
ಧಾತ್ರಿಯೊಳ್ ೧೭೪

( ಏಕಾಕ್ಷರ ಪದಕ್ಕೆ )

ಇಂದ್ರವಜ್ರವೃತ್ತಂ.

೫. ಆಗಳ್ ಜಸಂ ಕೆಯ್ದುವನಿಕ್ಕಿ ವೀರ
ಶ್ರೀಗಾಣ್ಮನಯ್ಯ ಪಾಣ್ಬತನಕ್ಕೆಳ[1]ಪ್ಪಯ್
ಪೋಗೇಕೆ ನೀಂ ಮೆಯ್ಗುರಿದಿರ್ಪಯೆಂದಾ
ಭೋಗೀಶ್ವರಂಗಂದು ವಿನಮ್ರ ನಾದಂ

ಸೂತ್ರಂ ೪೦.

ಧಾತುಂ[2] ವಿಹಿತಂ ತೃಶಬ್ದಂ
ಖ್ಯಾತ ವಿಭಕ್ತ್ಯಂತರಂಗದೊಳ್ ನಿಲ್ಕುಂ ತಾ
[3]ನಾ ತೆಱದೆ ನಿಲ್ಲದಂದುಪ[3]
ಜಾತಾರಾದೇಶಮಾಗಿ[4] ನಿಯತಂ ನೆಗಳ್ಗುಂ ೧೭೬

---

೧. ಪಾಂಬತಳರ್ಕೆನ. ೨. ಧಾತೃ ೩. ನಾತೆಱದಿಂದಲ್ಲದೊಡಪ. ನೇತೆಱದಿಂದಲ್ ದೊಡುಪ ೪. ಮಾಗೆ.



ಲಕ್ಷ್ಯಂ ( 'ಋ' ಕಾರದ ಸಹಜ ಸ್ಥಿತಿಗೆ )

೧. ಹೋತೃವೆ ನಾನಧ್ವರಿಯುಯ್
ಭ್ರಾತೃವೆ ನೀನುಟಿದ ಋತ್ವಿಜರ್ ಯಾದವರು
ದ್ಗಾತೃ ಶುಚಿಸಚಿವನೆನೆ ಸುರ
ಜೇತೃವೆ ಪಶುವಾಗೆ[1]ಯಾಮೆ ಬೇಳೆವೆ[1] ಮುನ್ನಂ ೧೭೭

( 'ಅರ' ಆದೇಶಕ್ಕೆ )

ಶಾರ್ದೂಲವಿಕ್ರೀಡಿತಂ.

೨. ಅನ್ನೋಡರ್ಜುನನೆಂಬೆನಂತಕ ಸುತಂ ಭರ್ತಾರನೆಂಬಾತನ
ಕ್ಕನ್ನಾನಾನ್ನ ವಿಶಾಕಿ[2] ವಲ್ಲಲನವಂ ಭೀಮಂ ಹಯಾಧ್ಯಕ್ಷತಾ
ಸನ್ನದ್ಧಂ ನಕುಲಂ ಗವಾಧಿಕೃತನಾ ಸಾದೇವ ನಂದಾವಳಿಂ
ದನ್ನರ್ ಕೀಚಕರಳ್ಕಿದರ್ ಮಗಳವೊಳ್[3] ಸೈರಂಧ್ರಿ
ಪಾಂಚಾಲನಾ ೧೭೮

ಸೂತ್ರಂ ೪೧.

ಬಿದಿಗಭಿಧಾನಂ ತಾನಂ
ತದಾದೊಡಕ್ಕುಂ ವಿಧಾತೃ ಶಬ್ದಂ ರಾಂತಂ
ತ್ರಿದಿವಸ್ಥಿತರೊಳರಾದೇ
ಶದಿಂದ ಮೊಡಗೂಡಿ ವರ್ತಿಕುಂ ಪಿತೃಶಬ್ದಂ ೧೭೯

---

೧—೧. ನಾವೆ ಬ್ಬೇಳ್ವೆವೆ. ನಾವೆ ಬೇಳೆವೆ. ೨. ನಾನಾಜ್ಯ ವಿಶಾಕ. ೩. ಳವಳ್

ಉದಾಹರಣೆ :

( ಪೂರ್ವಾರ್ಧಕ್ಕೆ 'ವಿಧಾತ್ರು' ರೂಪಕ್ಕೆ )

೧. ಕೆಯ್ವಾರವೇಂ ಪೊಗೞ್ತಿಯೆ
ಮುಯ್ವಾಂಪನಿತಂದವೊಂದೆ[1] ಸುಂದರಿಯಿರಡುಂ
ಮುಯ್ವುಂ ಪಡೆದಗ್ಗಳಿಕೆಗೆ
ಮೆಯ್ವೆರ್ಚೆ ವಿಧಾತ್ರುನಿರದೆ [2]ಮುಯ್ವುಂ ನೋೞ್ಪಂ[2] ೧೮೦

( ಅಪರಾರ್ಧಕ್ಕೆ : 'ಪಿತರ' ರೂಪಕ್ಕೆ )

೨. ಉಡುವವರು ಮನುಜ್ಬರುಮಂ
ನಡೆ ನೋಡಿ ಕನಲ್ದೊನಲ್ದು ಮುನ್ನಿನ ಭವದೊಳ್
ಕುಡದರ್[3] ಕಣ್ಬಡಿನೊಳ್ ಧೃತಿ
ಗಿಡೆ ಬಡವರ ಪಿತರರಂತೆ ಮಱುಗುತ್ತಿರ್ಪರ್. ೧೮೧

ಸೂತ್ರಂ ೪೨.

ಶ್ವಯುವಾಧ್ವನ್ ಸಖಿಯನ್ ಪ್ರ
ತ್ಯಯಮನ್ನಂತಂ ಬಹುತ್ವ ವಿಷಯಕೃತಾದೇ
ಶಯುತಂ ವಿಕಲ್ಪದಿಂದಂ
ಪ್ರಯೋಗಿಸಲ್ಪಡೆಗು[4] ಮೆಸೆಪಿನಿಂ ಕನ್ನಡದೊಳ್ ೧೮೨

---

೧. ನೊಂದೆ ೨-೨. ಮುಯ್ವಾಂತಿರ್ಪರ್. ೩. ಕೆಡೆದಂ. ೪. ಪಡುಗು.



ಪ್ರಯೋಗಂ.

ಸ್ರಗ್ಧರೆ ( 'ಶ್ವಾನ್' ರೂಪಕ್ಕೆ )

೧. ಶ್ವಾನಂಗಳ್ ಗಂಧ[1]ಮಾರ್ತಂಡನನತಿಹಿತದಿಂ
ಕಾಪುಗೊಂಡಿರ್ದುವುಗ್ರ
ಶ್ವಾನಂಗಳ್ ಕಂಡು ದೂರಾಂತರದೊಳವರ ಬರ್ಪಂದ
ಮಿಂಬಲ್ತಿದ[2] ಸ್ಮದ್
ಭೂನಾರೀನಾಥನೊಳ್ ತಳ್ತಿಱಿವ ಬವಸೆಯಂ ಪೂಣ್ದು[3]
ಬಂದಪ್ಪರೀತಂ
ಗೀ ನಿದ್ರಾಭಂಗಮಂ ಮಾೞ್ಪುದು ಪದನಣಮಲ್ತೆಂದು
ನಿಂದಾಂತುವಾಗಳ್ ೧೮೩

( 'ಯುವಾನ' ರೂಪಕ್ಕೆ )

ಸ್ವಾಗತವೃತ್ತಂ.

೨. ಈ ಯುವಾನರನವದ್ಯವಿದ್ಯರಾ[4]
ವ್ನಾಯುಶುದ್ಧರವದದಾತ ಕೀರ್ತಿಗಳ್
ತೋಯಜಾಕ್ಷಿ ನಡೇನೋಡ[5] ಮನ್ಮಥ
ಶ್ರೀಯನಾದರಿಸಿ ನಿಂದರಿಂತಿವರ್ ೧೮೪

( 'ಅಧ್ವಾನ' ರೂಪಕ್ಕೆ )

೩. ಪ್ರಣುತಗುಣರೆನಿಪ ವಿಬುಧಾ
ಗ್ರಣಿಗಳ್ ಕೆಯ್ಕೊಂಡು ಪೊಗೞೆ ಸಲೆ ನೆಗೞ್ದುವು ಧಾ
ರಿಣಿಯೊಳಗೆ ನಾಗವರ್ಮನ
ಗುಣವರ್ಮನ ಶಂಖವರ್ಮನಧ್ವಾನಂಗಳ್ ೧೮೫

---

೧. ಕಂಡು ೨. ಬಲ್ಲದ. ೩. ಶಾರ್ದೂಲ, ಪೂಣ್ದು. ೪. ವಿದ್ಯದಾ ೫. ನೋಡು

( 'ಸಖಾಯ' ರೂಪಕ್ಕೆ )

೪. ಸಮವಯಸಂ ಸಮಸತ್ತ್ವಂ
ಸಮಾನ ವಿಭವಂ ಸಮಾನ ಶೀಲವ್ಯಸನಂ
ಸಮ ವಿದ್ಯಾವಿಭವಯುತಂ
ಸಮಸುಖದುಃಖಂ[1] ಸಹಾಯನಕ್ಕೆ ಸಖಾಯಂ ೧೮೬

( 'ಶ್ರೇಯಾಂಸ' ರೂಪಕ್ಕೆ )

ಸ್ರಗ್ಧರೆ.

೫. ಈಯಲ್ ಬಂದತ್ತು ಕಲ್ಪಾಂಘ್ರಿಪಮಭಿಮತಮಂ
ಪೂರ್ವಪುಣ್ಯಾರ್ಜಿತಂ[2] ಕೊ
ಳ್ಳೀಯಲ್[2] ಬಂದತ್ತಿದೊಂ[3] ದಕ್ಷಯನಿಧಿಯೆನುತುಂ
ತನ್ನನೊಲ್ದಾ ತ್ರಿಲೋಕ[4]
ಶ್ರೀಯೆಲ್ಲಂ ಪೊರ್ದಿದಂತೇನೊಸೆದನೊ ಮನದೊಳ್ ಸೂಕ್ತಿ
ಕರ್ಣಾವತಂಸಂ
ಶ್ರೇಯಾಂಸಂ ಪ್ರೊನ್ನತಾಂಸಂ ಸುಖವಿಜನ ಮನೋ -
ಮಾನಸೋತ್ತಂಸ ಹಂಸಂ. ೧೮೭

(ಪಂಪನ ಆದಿಪುರಾಣ. ೯-೧೩೨)

('ವಿದ್ವಾಂಸ' ರೂಪಕ್ಕೆ)

೬. ಅದ್ವೈತವಾದಿನಿವಹಮ
ದದ್ವಿರದಘಟಾವಿಪಾಟನೈಕಪಟಿಷ್ಠಂ
ಸ್ಯಾದ್ವಾದಾಚಲಸಿಂಹಂ
ವಿದ್ವಾಂಸರ್ ಪೊಗಳೆ ವಾದಿರಾಜ್ಯಂ ನೆಗಳ್ದಂ ೧೮೮

---

೧. ದುಃಖ ಸುಖಂ ೨-೨. ಕೇಳೀಯಲ್. ೩. ದತ್ತದೊಂ.
೪. ತ್ರಿಲೋಕೀ



( ವಿಕಲ್ಪ ಗ್ರಹಣಕ್ಕೆ )

ಉತ್ಪಲಮಾಲೆ.

೭. ಜ್ಯಾಯನರಣ್ಯದೊಳ್ ನೆಲಸುಗುಂ[1] ಗಡಮಯ್ಯ[2] ಕನೀಯ
ನನ್ವಯ
ಶ್ರೀಯೊಳಧಿಷ್ಠಿತಂ ಗಡಮಿನಾನ್ವಯಜಾತರೊಳಿನ್ನವಿನ್ನವ
ನ್ಯಾಯಮವಿನ್ನವಿನ್ನವಬಳಾಮುಖರತ್ವಮವಿನ್ನವಿನ್ನವ
ಶ್ರೀಯಮವಿನ್ನವಿನ್ನವಕೃತ ಕ್ರಮವೃತ್ತಿಯಹಾರೊ
ಸ್ವೈರಿಪರ್ ೧೮೯

ಸೂತ್ರಂ. ೪೩

ಪಡೆಗುಂ ವಿಭಾಷೆಯಿಂದಂ
ಕಡೆಯೊಳದಂತತೆಯನಸ್ವರಂ ವೃದ್ಧನವೋಲ್
ಪಡೆಗುಮದರ್ಶನಮಂ ಮೇಣ್
ಪಡೆಗುಂ ದ್ವಿರ್ಭಾವವೃತ್ತಿಯಂ ಮೇಣ್ ಶ್ರುತಿವೋಲ್[3] ೧೯೦

ಪ್ರಯೋಗಂ.

೧. ಪರಿಣತವಯಸರೆಮಿರ್ಕ
ಣ್ಣುರುಡರೆಮೆಮಗಿಂಬುಕೆಯ್ವುದುಚಿತಂ ನಿನ್ನಿ[4]
ಗುರು ನುಡಿದ ನುಡಿಗೊಡಂಬಡು
ಗುರುವಚನಮ[5]ಲಂಘನೀಯ[5]ಮೆಂಬುದು ಮಗನೇ ೧೯೧

( ರನ್ನನ ಗದಾಯುದ್ಧ. ೪-೨ )

---

೧. ಸುವಂ. ೨. ಪೆಯ್ಯೆ ೩. ಶ್ರುತಿಯೋಳ್, ಕೃತಿಯೊಳ್ ೪. ನೀನೀ.
೫. ಲಂಘ್ಯನಿಯತ

೨. ಮೊದಲೊಳ್ ಚಪಲಂ ಮರ್ಕಟ
ನದು ವೃಶ್ಚಿಕದಷ್ಟನೆಂಬವೋಲ್ ನವವಯದು[1]
ಸ್ಮದಮಂತೆ[2] ಸುತಂ ಪಿತೃಧನ
ಮದಮತ್ತಂ ಮೂರ್ಖನೆಂದೊಡೇನಱಸುವುದೋ ೧೯೨

( ವ್ಯವಸ್ಥಿತ ವಿಭಾಷೆಗೆ )

ಪೃಥ್ವೀವೃತ್ತಂ.

೩. ಇವಂಬುನಿಧಿಕೂಪದಿಂದಮರನಂದನಕ್ಕೇತಮೆ
ತ್ತುವಲ್ಲಿ ಗಟಿಯಾಗಲುಂ ಕಡಲ್ಕೆಗುಣ್ಪನಾರಯ್ಯಲುಂ
ದಿವಕ್ಕಡರಲೇಣಿಯುಂ ಸಮೆಯಲುಂ ವಲಂ ಬಾಚ್ಚಿಯುಂ
ಬವೊಲ್ ಬೆಳೆದು ನಿಂದ ಪೆರ್ವಿದಿರ ಸುರ್ವಗುರ್ವೆಲ್ಲಿಯುಂ ೧೯೩

(ಲೋಪಕ್ಕೆ)

೪. ಸರಿವಟೆಗಱ[3]ವಂತಿರೆ ಘೋ
ರ್ಗರೆದೊಮೆರ್ಮಿದಲೆಱಗಿ ದೆಸೆಗಳೆಲ್ಲವುನೊಡನಾ
ವರಿಸಿ ತರತರದೆ ನಸುಮುಸು
ಳ್ದಿರೆ ಪುದಿದುವು ನಭವನಭವನಂಬುಗಳೆತ್ತಂ. ೧೯೪

(ದ್ವಿಭಾವಕ್ಕೆ)

೫. ದಿಕ್ಕನಿತುಂ ತೋಱಿದುವು ಜ
ಲಕ್ಕನೆ ಮೂಕಾದಿಗಳ್ಗವುಂದತಿಲಲಿತಂ
ವಾಕ್ಕಾದುವು ಕುಸುಮಿಸಿದುವು
ಮಿಕ್ಕೆಸೆವಾ ಕ್ಷುಪ[4]ಕುಜಾತ [5]ವೀರುತ್ತುಗಳುಂ[5] ೧೯೫

೧. ನವಯವವಮು. ೨. ಮುಂತ್ರಿ. ೩. ಕೆಚ್ಚಿ ೪. ಮಿಕ್ಕಿನವಾಕ್ಷಪ.
೫–೫. ನೀರೋತ್ಪ್ರಗಳುಂ.



## ಸೂತ್ರಂ ನಂ. ೪೪

ಅನುಸಂಧಿಸಿ ಕೃತ್ಸ್ನವ್ಯಂ
ಜನಂಗಳಿರೆ ಮುಂದೆ ಬಿಂದು ಪರಿವರ್ತಿಸುಗುಂ
ಮನ[1]ದೊಳ್ ವರ್ಗಂ[1] ಪರಮಾ
ಗಿ ನಿಲೆ ವಿಕಲ್ಪದೆ ತದೀಯಪಂಚಮಮುಕ್ಕುಂ ೧೯೬

ಪ್ರಯೋಗಂ.

( ಪೂರ್ವಾರ್ಧಕ್ಕೆ )

೧. ಕುಲಮುಂ ಚಲಮುಂ ವಿದ್ಯಾ
ಬಲಮುಂ ಶೌರ್ಯಾವಲೇಪಮುಂ ಪೊಗಟೆ ನೆಲಂ
ನೆಲಕ್ಕೆಲಂ ನೆಗಟ್ದಂ ದ್ವಿ
ಟ್ಕುಲಕುಲನಗದಳನಪಟುಪವಿಪ್ರತಿಮಭುಜಂ ೧೯೭

( ಅಪರಾರ್ಧಕ್ಕೆ ) ವರ್ಗದ ಪಂಚಮಾಕ್ಷರಕ್ಕೆ

೨. ಪನ್ನಗ ತಳ್ಪಂಙ್ಕಂಸಹ
ರನ್ನಗಧರನಸುರಮರ್ದನಙ್ಚಕ್ರಿ ಮುಕು
[2]ನ್ದಂನ್ನಳಿನನಾಭನೇ ಗೊಳ
ಲೆನ್ನಂಲಂಬ[2]ಗರ್ವದಿಂದಿದಿಱುವನಾವಂ ೧೯೮

ಇದು ಶಬ್ದಸ್ಮೃತಿಯೊಳ್ ನಾಮಪ್ರಕರಣಂ ಸಮಾಪ್ತಂ.

೧–೧. ದೊಳವರ್ಗಂ. ೨–೨. ದಂ ನಳಿನಾಭನೆನಿಸಗೊಳ.
ದಂ ನಳಿನನಾಭನೆಲೆಗೊಳ|ಲೆನ್ನಂ ಬಲ

# ೪. ಸಮಾಸ ಪ್ರಕರಣಂ

**ಸೂತ್ರಂ ೪೫.**

ಸಂಗತಿಯಿಂದಂ ನಾಮಪ
ದಂಗಳನೇಕಾರ್ಥಗತಿಯೊಳಾಗೆ ಸಮಾಸಂ
ಸಂಗಳಿಸುಗುಂ ವಿಭಕ್ತಿಗ
ಳಂಗಳ್ಗಂತರದೊಳಲ್ಲಿಲೋಪ ಮದಕ್ಕುಂ

ಅದೆಂತೆನೆ. ( ಸಮಾಸ ಸ್ಥಿತಿಗೆ )

೧. ಕಡುಗಾಡಿ ನಾಡೆಯುಂ [1]ಕ
ಣ್ಗೆಡರಿ[1] ಮನಂ ಬೆರ್ಚೆ ಸುತನ ಬರ್ಪಂದಂ ಚೆ
ಲ್ವೊಡರಿಸೆ ಬಲ್ವಿಡಿ[2] ವಿಡಿದುದು
ತೊಡರ್ದಳಿಪಿಂ ನೋಟ್ಪ ನೋಟಕರ್ಕಳ ಮನಮಂ ೧೦೦

( ಅಲ್ಲಿ ಗಮಕಕ್ಕೆ )

೨. ಕಟುದ ಮನಃಪ್ರಿಯವಿರಹದಿ
ನಟಿಲ್ದು ಬಸವಟುದು ಮೋದೆ ತನ್ನುರದೊಳ್ ಬಾ
ಸುಟ ತಳ್ಪ ಶೋಕ ಶಿಖಿಯುಂ
ಕಟಿಲ್ದಲೆಂದೊಟ್ಟೆದಸುಗೆದಳಿರಂ ಪೋಲ್ಕುಂ ೧೦೧

೧—೧. ಕ|ಣ್ಗೆಡರಿ. ಕ|ಣ್ಗೆಡದೆ. ೨ ಬಲ್ವಿಕೆ ಬಲಿದೀ.



(ಅಂತುಮಲ್ಲದೆಯುಂ)

ತರಳವೃತ್ತಂ.

೩. ಬಲಿಯ ಮಾಂತದ ಬೇಟದೊಳ್ ಪೊಲಗೆಟ್ಟು ಬೆಚ್ಚನೆ[1] ಬಿಟ್ಟ ಕಣ್-
ಮಲರ್ಗಳಂ ಮಲೆದಿಟ್ಟನೆ[2]ಯ್ತರೆ ಕಾಯ್ದು ಸಂಗೊಳಿ ದೈತ್ಯನಂ
ಪೊಲಸು ನಾರ್ಪಿನೆಗಂ ತ್ರಿಶೂಲದಿನೊತ್ತಿ[3]ಕೊಂಡ ಕುಮಾರಿ ಕೂ
ರ್ತಲಸದಿರ್ಕೆ ಭುಜಾಸಿಧಾರೆಯೊಳಂಕಮುಳ್ಳರ ದೇವನಾ ೧೦೨

೪. ಆ ಜಂಬೂದ್ವೀಪಮಹಾ
ರಾಜಕಿರೀಟಾನುಕಾರಿ ಚಾಮೀಕರವಿ
ಭ್ರಾಜಿತಕಟಕ ಮಗೇಂದ್ರಸ
ಮಾಜಚಮೂಚಕ್ರವರ್ತಿ ಮಂದರಶೈಲಂ ೧೦೩

**ಸೂತ್ರಂ ೪೬.**

ಉತ್ತರಪದದರ್ಥಂ ಮೆ
ಯ್ವೆತ್ತಿರೆ ತತ್ಪುರುಷಮಂತದೇಕಾಶ್ರಯಮಾ
ಗುತ್ತುಮಿರೆ ಕರ್ಮಧಾರಯ
ಮೆತ್ತಂ ದ್ವಿಗುಸಂಜ್ಞಮದುವೆ ಸಂಖ್ಯಾದಿಪದಂ ೧೦೪

ಪ್ರಯೋಗಂ : ( ತತ್ಪುರುಷಕ್ಕೆ )

ಚಂಪಕಮಾಲೆ

೧. ಅರಮನೆಗಲ್ತು ಸೂಳೆಮನೆಗಲ್ತು ಸವಣ್-ಮನೆಗಲ್ತು ಕೂಡೆ ಬ
ಲ್ಲರ ಬಗೆಗಲ್ತು ವಸ್ತುಕೃತಿಯುಂ ಸಲೆವೇಟ್ಪುದು ಕಲ್ತು ಪೇಟಿದಂ
ದರಮನೆಗಲ್ತು ಸೂಳೆಮನೆಗಲ್ತು ಸವಣ್ ಮನೆಗಲ್ತು ಕೂಡೆ ಬ
ಲ್ಲರಬಗೆಗಲ್ತುದಾವೆಡೆಗಮುಲ್ತದು ಕಲ್ಪಿಂ ವಲಂ[4] ಕವೀಂದ್ರರಾ ೧೦೫

೧. ಬಿಚ್ಚನೆ. ೨. ದಿರ್ಜನೆ ೩. ಮುತ್ತಾ. ೪. ವರಂ.

( ಕರ್ಮಧಾರಯಕ್ಕೆ )

ಮತ್ತೇಭ ವಿಕ್ರೀಡಿತಂ

೨. ಅಲರ್ಗಣ್ ಪೊಂಗಿದ ಲಾಳೆ[1]ವಾಯ್ ನಗೆಮೊಗಂ ತೊಂಗಲ್ಗುರುಳ್ ಕೆಂದಳಂ
ಸುಲಿಪಲ್ ಸೋರ್ಮುಡಿ ತೆಳ್ವಸಿಱ್ ಪೆಱ್ತೊಸಲ್ ಪೊಂಬಾಳ್[3] ಪಚ್ಚೋಲೆ ನೇ
ಱಾಲ ಸಣ್ಣಂ[2] ತಿಳಿಯೆಣ್ಣೆಯೊಳ್ ಬಯಸಿ ತೊಯ್ದುಂತಪ್ಪ ನುಣ್ಗೂರ್ಪು ಪೆರ್
ಮೊಲೆ ಚೆಲ್ವಾಗಿರೆ ಸಿಂದ ಬೇಡಿತಿಯರಂ ಕಂಡಂ ಮಹೀವಲ್ಲಭಂ ೨೦೬.

(ದ್ವಿಗುವಿಂಗೆ)

೩. ಇರ್ವಾಳ್ ಮೂವಾಳಿಕ್ಕಿ
ದುರ್ವರೆಯೊಳ್ ಬೆಳಗೆ ಸಾರೆ[3] ಕೊಳೆ ಪದವಱ್ಗಳ್
ಕರ್ವಿನ ಮಡಲಂತೆ ಕವ
ಲ್ತುರ್ವಿದ ಕೆಯ್ವೊಲಗಳೆಸೆಗುಮೋ[4] ರೊಂದೆಡೆಯೊಳ್ ೨೦೭

## ಸೂತ್ರಂ ೪೭.

ದ್ವಿಪದಂ ಮೇಣ್ ಬಹುಪದಮ
ನ್ಯಪದಾರ್ಥದೊಳೊಂದಿ ನಿಲೆ ಬಹುವ್ರೀಹಿ ಸಮ
ಸ್ತ [5]ಪದಾರ್ಥಂ ದ್ವಂದ್ವಂ[5] ಪೂ
ರ್ವಪದಪ್ರಾಧಾನ್ಯಮವ್ಯಯೀಭಾವಾಖ್ಯಂ[6] ೨೦೮

೧. ಲೋಳೆ. ೨-೨. ಬಣ್ಣಂ ೩. ಬೆಡೆಗೆ ಸಾಲೆ. ೪. ಸೆಡುವೋ.
೫-೫. ಪದಾರ್ಥದ್ವಂದ್ವಂ. ೬. ಭಾವಾರ್ಥಂ



ಪ್ರಯೋಗಂ. (ಬಹುವ್ರೀಗೆ)

೧. ಕುಡು[1]ವಿಲ್ಲನೆಚ್ಚ ಸರಲುಂ[2]
ನಡದು ದಲಂದೊರ್ವನೆರ್ದೆಯನೊಳ್ಗಬ್ಬುಮುವೊಳ್
ನುಡಿಯುಂ ಗೇಯಮುಮುರ್ಚದ
ಕಡುಗಲ್ಲೆರ್ದೆಯೆರ್ದೆಯ ನಂಬು ಮೇಣಾರ್ಚುಗುಮೋ ೨೦೯

೨. ಪಟ್ಟಿಕ[3] ಮೂಗಿನ ಮುರ[4]ವುಲಿ
ಪೊಟ್ಟೆಯು[4] ಕುಸಿಗೊರಲ ಕೆಂಚುದಲೆ[5] ನವಿರ [6]ಕರಂ
[6]ಕೆಟ್ಟೊಡೆದ ಸರ[7]ದವಂ [8]ಕಡೆ
ಪಟ್ಟು[8] ಮನಂಗೆಟ್ಟು ನಾಡುನಾಡಂ ತಿರಿಗುಂ. ೨೧೦

( ದ್ವಂದ್ವಕ್ಕೆ )

೩. ಕಱ್ಮುಱ್ಗಳೊಳವು ನೋೞ್ಪೊಡೆ
ಪೆಱಪೆಱರ ಕುಲಕ್ಕೆ ಕೊಂಡ ಕೊಟ್ಟೆಡೆಗಳೊಳಂ
ಕಱ್ಯಿಲ್ಲ ತೈಲನಲ್ಲದೆ
ಪೆಱನಾವೊಂ ಪಿಕ್ಕಿ[9] ನೋೞ್ಪೊಡಿರ್ತಲೆ ಗೋಜಂ[10] ೨೧೧

ಚಂಪಕಮಾಲೆ.

೪. ತೊಱಗಲೆ ಅಟ್ಟಹಳ್ಳಿ ನೆಗಬ್ದಾಜಿರಗೋಳವೊನಿಪ್ಪಗುರ್ವವೆ
ತ್ತುಱ್ಕೆಯ ಬೇಡವಟ್ಟುಗಳ ಬೂತುಗ ಬೀರುಗಗೋಯೆ[11]ಯರ್ಕಳಂ
ನೆಱ್ಯರೆನಿಪ್ಪೊಡಂ ಕಿಡಿಸಲಂಕದ ಮುನ್ನಿನ ಚಕ್ರವರ್ತಿಗಳ್
ಪೆಱರಳ[12] ವಲ್ತುವಂ ಕಿಡಿಸಿತೊಟ್ಟಜೆ[12] ತೈಲಪಚಕ್ರ
ವರ್ತಿಯಾ. ೨೧೨

೧. ಕಡು. ೨. ಕೋಲುಂ. ೩. ಕಟ್ಟಿಕ. ೪-೪ ದುಲಿ । ದೊಟ್ಟೆಯು.
೫. ಕೆಂದಲೆಯ. ೬-೬. ಕಲಂ । ಕಿಟ್ಟೊ; ಕರ್ದಂ । ಕೆಟ್ಟೋ ೭. ಕರ.
೮, ಬಗೆ । ಗೆಟ್ಟು. ೯. ಬರ್ಕೆ ೧೦. ಗೋಲಂ ಗೊವಜಂ, ೧೧ ಗೋಲೆ,
೧೨. ವಲ್ತವಂ ಕೆಡಿಸಿದೊಟ್ಟಜೆ,

( ಅವ್ಯಯೀಭಾವಕ್ಕೆ )

೫. ಸಂತಂ ಕಿಟ್ಕಿಱಿ³ಗಳೊಳೋ[1]
ರಂತಿರೆ ಕೆಯ್ಗಾವವಳ್ದಿರಂ[2] ನೋಟ್ಪವರಂ
ಮಿಂತಲೆವಾಯ್ತ್ತರೆ ಪೊರವು
ಯ್ವಂ ತಾಗಿರೆ ತೆಗೆದು ಮದನನಾರ್ದಿಸುತಿರ್ಪಂ. ೨೧೩

ಸೂತ್ರಂ ೪೮

ಪತ್ತಿರೆ ಕಾರಕದೊಳ್ ಮುಂ
ದೊತ್ತಿ ಸಮರ್ಥಕ್ರಿಯಾಪದಂ ಪದವಿಧಿ ತಾ
ನೊತ್ತರಿಸುಗುಮದಱೊಳ್ ತ
ಳ್ತಿತ್ತಮದಂತಕ್ಕೆ ಬಿಂದು ಸಂದಿಸಿ ನಿಲ್ಕುಂ ೨೧೪.

ಪ್ರಯೋಗಂ. (ಕ್ರಿಯಾಸಮಾಸಕ್ಕೆ)

೧. ಊರೇಱಲ್[3] ಮನೆಮಾಡ
ಲ್ಕಾರಂಬಂಗೆಯ್ಯಲೆಟ್ಟುಗೊಳಲಾಳಾಳ[4]
ಲ್ಕಾರಾನುಮಿಡ್[5]ಲ್ಕೆಂದುಂ
ದಾರುಣತಾರೆಗಳನುಱುಯೆ ಪೆಱವಱಿಳುಚಿತಂ ೨೧೫

೧. ಕಿಕ ೨. ನಂದಿ ೩. ಊರ ತೆಱಲ್ ೪. ಳಾಗ. ೫. ಮಿರ್.



ಸೂತ್ರಂ ೪೯

ಉತ್ತರ ಪದಂ ವಿಶೇಷ್ಯದೊ
ಳೊತ್ತರಿಸಿರೆ ಪೂರ್ವಪದದುಪಾಂತ್ಯಸ್ವರದಿಂ
ದತ್ತಿರ್ದುರ್ವರ್ಕೆ[1] ಲೋಪಂ
ಮತ್ತಮಿಕಾರಕ್ಕೆ ಬಹುಳಮಕ್ಕುಮೆಕಾರಂ ೨೧೬

ಪ್ರಯೋಗಂ ( 'ಪಿರಿದು' 'ಪೆರ್' ಆದುದಕ್ಕೆ )

೧. ಪೆರ್ಮರನನಡರ್ದ ವನಲತೆ
ಕಾರ್ಮುಗಿಲಂ[2] ತಳ್ತ ಮಿಂಚು ವಿಂಧ್ಯಾಚಲಮಂ
ನೆರ್ವಿಡದ ನರ್ಮದೆಯೆನಿಸಿದ
ಳೊರ್ಮೆಯೆ ವನಚರನನಪ್ಪಿ ವನಚರಿಯೊರ್ವಳ್ ೨೧೭
(ಬಹುಳಗ್ರಹಣಕ್ಕೆ : 'ಬಿಣ್ಣಿತು' 'ಬಿಣ್' ಆದುದಕ್ಕೆ)
೨. ಪಣ್ಗಾಯ್ ತಳ್ತ ತುಱುಂಗಲ
ಬಿಣ್ಗೊನೆಯಿಂ ತೂಗಿ ತೊನೆವ ಕೌಂಗಂ[3] ತನ್ನ
ತ್ತಣ್ಗೆ ಬರೆತೆಗೆವ ತೆಱದಿಂ
ಕಣ್ಗೊಳಿಸಿದುದೆಳಸಿ ನಾಗಲತೆ ದಾಂಗುಡಿಯಿಂ. ೨೧೮

ಸೂತ್ರಂ ೫೦

ಸ್ವರಮಾದಿಯಪ್ಪವವು ಮುಂ
ತಿರೆ ದೀರ್ಘಂ ಮೊದಲೊಳಗುರುಗಕ್ಕುಂ ತದವಾಂ
ತರದೊಳ್ ಣ ಟ ಳ ನ ತಂಗಳ್
ದೊರೆಕೊಳೆ ತಳೆಗುಂ ದ್ವಿರುಕ್ತಿಯುಂ ಬಹುಳತೆಯಿಂ ೨೧೯

೧ ದರ್ಕೆ. ೨. ಲೊಳ್. ೩ ಕೌಂಗು. ೪. ಕಡು ೫. ಕೋಲಂ

ಪ್ರಯೋಗಂ (ಪೂರ್ವಾರ್ಧಕ್ಕೆ)

೧. ಕಾರೊಸಡುಂ ಕರ್ಬಾಯ್ಯುಂ
ಪೇರೊಡಲುಂ ತೊಳಪ ದಾಡೆಯುಂ ಪೆರ್ಬಸಿಱುಂ
ಕ್ರೂರೇಕ್ಷಣಮುಂ ದನುಜಾ
ಕಾರಮನೊಡ[1]ರಿಸೆ ನಿಶಾಟರರ್ವಿಸಿ ತೋರ್ಪರ್ ೨೨೦

( ಅಗುರು ಗ್ರಹಣಕ್ಕೆ )

ಮಣಿವಿಭೂಷಣವೃತ್ತಂ.

೨. ಮೇಲುದಂ ಮಱೆದು ಮೆಯ್ಮಱೆದೊರ್ವಳೊಱಲ್ದುಂ ಮುಂ
ಬಾಲೆಯಂ ತಿರಿಪಿ ನೂಂಕಿ ಪವಿತ್ರಮನಿಟ್ಟು ಪ
ಚ್ಚೋಲೆವಚ್ಚದೊಳೊಡಂಬಡೆ ಬಂದು[2] ವಿದಗ್ಧ ಭೂ
ಪಾಲನಂದನನನಂದರುಣಾಧರೆ ನೋಡಿದಳ್ ೨೨೧

('ಣ' ಕಾರಕ್ಕೆ)

೩. ಪಣ್ಣನೆ ತೊಟಲ್ದು ತೀಡುವ
ತಣ್ಣೆಲರೊಳೆಲರ್ಚಿ ವನಚರವ್ರಜಮುದಱೊಳ್
ತಣ್ಣನೆ ತಣಿದಿರೆ[3] ಬನದೊಳ್[3]
ಪಣ್ಣನೆ ತಿನುತಿರ್ಪುವೆಳಸಿ ತರುಚರಕುಳಮುಂ ೨೨೨

( 'ಟ' ಕಾರಕ್ಕೆ )

೪. ನಿಟ್ಟೆಯ್ದಿಯಾಗು ಪತಿಯೊಳ್[4]
ತೊಟ್ಟನುಶಿವಯಾಗು ಶೀಲವತಿಯಾಗು ಚಿರಂ
ನಿಟ್ಟಾಯುವಾಗು ನೀನೆಂ
ದಿಟ್ಟರ್ ಸೇಸೆಯನಗಣ್ಯ ಪುಣ್ಯಾಂಗನೆಯರ್ ೨೨೩

---

೧. ಮುವೊಡ ೨. ಬಂದ ೩—೩. ಪೀನಂ ೪, ಪತಿಗೋ | ತು



( 'ಳ' ಕಾರಕ್ಕೆ )

೫. ಆಳ್ವಾಡಿ[1] ನರನ ಕೂರ್ಗಣೆ
ಯಳ್ಳೇಱಿಂಗಳ್ಕಿಬಳ್ಕಿ ಕುರುಬಲಮೆಲ್ಲಂ
ಬೆಳ್ಳೋಟವೋಡೆ ನಕ್ಕನಿ
ಸೊಳ್ಳಾಳೆಡೆಗೋದನೊಡಱಿ ಚಟ್ಟ[2]ನೊಳವಜಂ[3] ೨೨೪

( 'ನ' ಕಾರಕ್ಕೆ )

೬. ಇನಿಯಳ ತನಿ[4]ಸೋಂಕಿನ್ನುಣಿ[5]
ಸನೆ ಮಾಲ್ಯಾಭರಣಲೇಪನಂ ತಂಬುಲಮೆಂ
ಬಿನಿತುಂ ರಾಗಮನಾಗಿಸೆ
ಮನದೊಳ್ ದಿವಿಜೇಂದ್ರ ವಿಭವದಿಂಸುಖಮಿರ್ದಂ[6] ೨೨೫

('ತ' ಕಾರಕ್ಕೆ)

ತರಳವೃತ್ತಂ.

೭. ಮಡದೊಳೊಂದುವುದೆತ್ತ ಕಿತ್ತಡಿಗಳ್ಗೆನಿಪ್ಪ ತೊಳಪ್ಪುವಾ
ಮಡದೊಳೊಂದಿಯೆ ನಿಂದ ಕಿತ್ತಡಿಗಳ್ಗೆ ನಿತ್ಯನಿಯಾಮದಿಂ
ಪೊಡೆವಡಿಂ ಗಡಮೆಂದು ನೀಱರನೂಱಿ ಸಾ[7]ಱುವ ಮಾಟ್ಕೆಯಿಂ
ಪೊಡೆವ ಡಿಂಡಿಮಮೆಂಬಿನಂ ಕಳನೂಪುರಧ್ವನಿ ಪೊಣ್ಮುಗುಂ ೨೨೬

---

೧. ಡೆ. ೨. ಭಟ್ಟ. ೩. ಳೋಜಂ. ೪. ತಳ, ೫. ಕಿನ್ನುಣಿ
೬. ಮಿರ್ದೆಂ ೭. ಮಾ

( ಬಹುಳಗ್ರಹಣಕ್ಕೆ )

೮. ಅಂಚೆಯರಗಿಳಿಯ ಪುರುಳಿಯ
ಕೊಂಚೆಯ ಕೋಗಿಲೆಯ ನವಿಲ ಪಾರಾವತದೊಂ
ದಿಂಚರದಿಂದಂ ಶಬ್ದಾ
ತ್ಮಂ ಚರಮಚರಂ ಜಗಂ ದಲೆನಿಸಿದಿದು ಬನಂ ೨೨೭

**ಸೂತ್ರಂ ೫೧**

ಕಡಿದು ನಿಡಿದೆಂಬಿವೆರಡಱ
ಕಡೆಯೊಳ್ ಟತ್ವಂ ತಕಾರಮಕ್ಕುಂ ಕಿಱಿದೆಂ
ಬೆಡೆಯೊಳ್ ಸ್ವರಮಿರೆ ತಾಮವು
ಪಡೆಗುಮುಕಾರಾಂತ ಭಾವಮಂ ವ್ಯಂಜನದೊಳ್ ೨೨೮

ಪ್ರಯೋಗಂ ('ಕಡಿದು-ನಿಡಿದು' ಗಳ್ 'ಕಟ್-ನಿಟ್' ಆದುದಕ್ಕೆ)

೧. ಕಟ್ಟಾಯದ ಕಣೆ ಪೆಂಪಿನ
ಕಟ್ಗಳೆ [1]ಚಾವಟದ ಮೇರು[1] ನನ್ನಿಯ ತವರೂರ್
ನೆಟ್ಟನೆನಿಸಿದ ಜಪಂ ನೇ
ರ್ವಟ್ಟ[2]ರೆ ನಿಟ್ಟಾಯುವಕ್ಕೆ[2] ದುಟ್ಟತಳಕ್ಕಂ ೨೨೯

೧. ಚೌತನದ ಮೇಗು. ೨. ರ ದಿಟ್ಟಾಯು.



( 'ಕಿಱಿದು' 'ಕಿತ್' ಆದುದಕ್ಕೆ )

೨. ಬಾಟೆಯ ಖರ್ಜೂರದ ಕಿ
ತ್ತೀಟೆಯ ಕರ್ಮುರದ ಮಾವಿನರನೇಱಿಲ ಕಂ
ಚೀಟೆಯ ಪಲಸಿನ ಮರದಿಂ
ನೂಟದು ಮೆಸೆದಿರ್ಕುಮು[1]ದಱ ಬಹಿರುದ್ಯಾನಂ. ೨೩೦

( ಉದಂತಭಾವಕ್ಕೆ : 'ಕಡಿದು-ನಿಡಿದು' ಗಳ್ 'ಕಡು-ನಿಡು' ಆದುದಕ್ಕೆ)

೩. ತೊಡೆ[2]ಯಿಂ ಕಡುಗುದುರೆಗಳಂ
ಮಡದಿಂ ನಡು[3]ಪಟ್ಟ ದಂತಿಯಂ ನಿಡುದೋಳಿಂ
ಕಡುವಾಳಂ ಕೂರಸಿಯಂ
ಕಡಂಗಿದಣೆಯಂ[4] ಸಮಂತು ಬಸದಾಗಿಸುವಂ[5] ೨೩೧

( 'ಕಿಱಿದು' 'ಕಿಱು' ಆದುದಕ್ಕೆ )

೪. ಕಿಱುನೆಲೆಯ ಲತಾಲಲಿತೆಗೆ
ತಿಱಿದುಕೊಳಲ್ಕಪ್ಪ[6] ಸಾರ್ಕೆಯೊಳ್ಗೊಂಬುಗಳೊಳ್
ತುಱುಗಿದ ತಳಿರಿಂ ನನೆಯಿಂ
ಕಿಱುಮಿಡಿಯಿಂದೆಸೆದುದಸದಳಂ ಮಾಕಂದಂ ೨೩೨

**ಸೂತ್ರಂ ೫೨.**

ಪಚ್ಚನೆಯುಂ ಕೆಚ್ಚನೆಯುಂ
ಬೆಚ್ಚನೆಯುಮೆನಿಪ್ಪ ಶಬ್ದದಂತಕ್ಕಕ್ಕುಂ
ಬೆಚ್ಚಂತಿರೆ ಮತ್ವಂ ಕೆಲ
ರಿಚ್ಚೆಯಿಪರ್ ಸ್ವಂತಮುಮನೆ ಕಾರೇ[7]ತ್ವಮುಮಂ ೨೩೩

೧. ದಿದುರ್ಗದ ೨. ಉಡೆ. ೩. ನಡೆ. ೪. ದರಿ
[illegible] ದಾಗಿಸುಗುಂ. ೬. ಕೊಳಲ್ಬರ್ಪ. ೭. ಕಾರತ್ವ.

ಪ್ರಯೋಗಂ

(ಮತ್ವಕ್ಕೆ 'ಪಚ್ಚನೆ-ಕೆಚ್ಚನೆ' ಗಳ್ 'ಪವ್-ಕೆವ್' ಆದುದಕ್ಕೆ)

೧. ಪಂದಳಿರ ತೋರಣಂ ತ
ಳ್ತೊಂದಿದ ಕೆಂಗುಡಿಯ ಪುದಿವು ಮುತ್ತಿನ ಕಡೆ[1] ಚೆ
ಲ್ವಿಂದೆಸೆವ ಮಂಗಳಾನಕ
ದೊಂದು ರವಂ ಬಗೆಗೆ ವಂದುದಂದರಮನೆಯೊಳ್ ೨೩೪

('ಬೆಚ್ಚನೆ' 'ಬಿಸು' ಆದುದಕ್ಕೆ)

೨. ಎನಿತುಂ ಕಾಯ್ದುಂ ಬೆಂಸಿರ್
ಮನೆಸುಡದೆಂಬಂತೆ ನಿನಗವರ್ ನಿಲೆ ಕಾಯ್ದುಂ
ಮನದೊಳ್ ಪೊಲ್ಲದ[2] ನೆಂದುಂ[3]
ನೆನೆಯರಿ[4]ದಂ ನಂಬು ಕುರುಕುಲಾಂಬರ[5] ಭಾನೂ ೨೩೫

(ಸ್ವಾಂತಾಧಿಕಾರಕ್ಕೆ 'ಪಚ್ಚನೆ-ಕೆಚ್ಚನೆ' ಗಳ್ 'ಪಸುರ್-ಕಿಸು'ಎಂದಾದುದಕ್ಕೆ)

೩. ಪಸುರ್ವೊನ್ನ ಜಗಲಿ ಪಚ್ಚೆಯ
ಪಸುರ್ವಂದರ್ ಮುತ್ತಿನಕ್ಕಿ ನೀಲದ ಜಾಗಂ
ಕಿಸುಗಲ್ಲರುಣಸರೋರುಹ
ಮೆಸೆದಿರ್ದುವು ರಾತ್ರಿಮತಿಯ ಬೀಡಿನೊಳೆತ್ತಂ ೨೩೬

---

೧ ಕೊಡೆ. ೨. ಪೊಲ್ಲಮು. ೩. ನೆಂತುಂ. ೪. ಯರ
೫. ಕುಲಾನ್ವಯು



('ಬೆಚ್ಚನೆ' 'ಬಿಸು' ಆದುದಕ್ಕೆ)

೪. ವಾಸರಪತಿ ಬಿಸುಗದಿರಿಂ
ಪೇಸದೆ ತವೆ ಪೀರ್ಗುಮೆಂಬ ಮುಱುಕದೊಳಂಭೋ
ಜಾಸನನಂಬುಜವನಮಂ
ಬಾಸಣಿಸಿದೆನೆನಿಪುವಿಡಿದ[1] ತಾವರೆಯೆಲೆಗಳ್ ೨೩೭

ಉದಾಹರಣೆ

(ಯೋಗಭಾವದಿಂ ಕೇವಲ ಸ್ವಂತಕ್ಕೆ)

೫. ಬೇಸರಿಸುವಂಗಜಾಗ್ನಿಯ
ಕೇಸುರಿ ಕೊಳೆ ಕವಿದ ಪತಿಯ ವಿರಹದಿನಾಗಳ್
ಕೀಸುಗಳೆವಂತೆ[2] ಕಡಗವು
ನಾ ಸತಿ ಕಳೆದಿತ್ತಳಾತ್ಮಕರಪಲ್ಲವದಿಂ ೨೩೮

ಸೂತ್ರಂ ೫೩

ಪೊಸತು ಪಬದೆಳದು ಪೊಱಗೊಳ
ಗು ಸಮುಮೆನಿಪ್ಪ[3] ವಱೊಳತ್ವಮಂತಕ್ಕೆ ನಿಪಾ
ತಿಸೆ ಪಡೆಗುಮವಱೊಳೊಳಗಿಂ.
ಗಸಂಗದಿಂ ಸಮನಿಸಿರ್ಕುಮುಳ್ಳಾದೇಶಂ ೨೩೯

---

೧. ಟಿಸೆವ ೨. ಪಂತೆ ೩. ನಿಪ್ಪ

ಪ್ರಯೋಗಂ

( 'ಪೊಸತು' 'ಪೊಸ' ಎಂದಾದುದಕ್ಕೆ)

೧. ಪೊಸದೇಸೆಯಂ ಬೆಡಂಗಂ
ರಸ[1] ಘಟ್ಟಿಯನರ್ಥದೃಷ್ಟಿ[1]ಯಂ ಬಗೆವರೊ ಭಾ
ವಿಸುವರೊ ಸಾರಣೆಯಂತಿರೆ[2]
ಕಸವನೆ[3] ಪಿಡಿ[4]ವರ್ ಕೆಲರ್[4] ಮಹಾಪುರುಷರ್ಕಳ್ ೨೪೦
( ರನ್ನನ ಅಜಿತತೀರ್ಥಕರ ಪುರಾಣತಿಲಕಂ. ೧–೯೧ )

( 'ಪಱಿದು' 'ಪಱಿ' ಎಂದಾದುದಕ್ಕೆ)

೨. ತುಱಿಕಲಡುಗೆಗಳೊಳೇಂ ಪಱಿ
ಗಱಿವೆಯ ಕೂೞ್ ತವುಡುಗಳಿದ ತೊವರಿಯ ತೊವೆ ಕಾ
ಯ್ದಱಿಪಿದ ತುಪ್ಪಂ ಕೋಡುವ
ಕಱಿಲಲ್ಲದೆ ದಿವ್ಯಭೋಜನಂ ಪೆಱತುಂಟೇ[5] ೨೪೧

( 'ಎಳದು' 'ಎಳ' ಎಂದಾದುದಕ್ಕೆ )

೩. ಎಳದಳಿರ ತುಱುಗಲೊಳ್ ನೆಱೆ
ದಳ[6] ದಳಪೆಳವಾವಿನಳ್ಳೆಗೊಂಬಂ ತಳ್ಪೊ
ಯ್ದೆಳಸಿದ ವಸಂತದೂತಿಯ
ಮಿಳಿರ್ವುಯ್ಯಲನಾಡುವಬಲೆ ಪಾಡಿದಳೊರ್ವಳ್ ೨೪೨

೧. ಪುಷ್ಪಿಯನರ್ಥಸ್ಸ ೨. ಜಿಗೆಯುವೋಲ್ ೩. ಕಸವಂ ೪–೪. ದೆಳಸುವರ್
೫. ತೊಳವೇ ೬. ಬೆಳಿದಳಿಪಿಳೆ



( 'ಪೊಱಗು' 'ಪೊಱ' ಎಂದಾದುದಕ್ಕೆ )

೪. ಅಳವಿಗಱಿದುರುನಿತಂಬ
ಸ್ಥಳಭಾರಮನಾಂತ ಕಾಲ್ಗೆ ಪೊಱ ಅಡಿಗಳೊಳೇ
ಲಲಿತತುಳಾಕೋಟಿಗಳಂ
ತಳೆವುದದೇವಿರಿದೊ ಮದಗಜಾಲಸಗತಿಯಾ ೨೪೩

('ಒಳಗು' 'ಒಳ' ಎಂದಾದುದಕ್ಕೆ

೫. ಒಳಕೆಯ್ಯೊಳಿರ್ದು ಪಲ್ಗಿರಿ
ದೊಳವಾಲಂಗೊಂಡು ಮೊರೆವ ಭಟಕನ ತೆಱದಿಂ
ದೊಳಪೊಕ್ಕು ದುರ್ಗಮಂ ಚಂ[1]
ಚಳಚಿತ್ತಂ ನುಡಿಗುಮೆಮಗೆ ಬಲ್ಗಂ[2] ಡಿಕೆಯಂ ೨೪೪

೬. ಸಮುಸುತಿ[3] ಯೊಳೊಂದಿದೊಳ್ಪಿನ
ರಮಣೀರಮಣೀಯಗೇಯಮಾಸ್ಥಾಯಿಕೆಯೊಳ್
ಸಮುಸಂದಮರ್ದಿನ ಸರಿವಱಿ[3]
ಸಮಂತು ಕಱಿದಪ್ಪುದೆಂ[4] ಬಿನಂ ರಂಜಿಸುಗುಂ. ೨೪೫

೭. ಒಳಗುಳ್ಳೋವಣಮುಮರ್ದಿರೆ
ಚಳನಂ[5] ಪೊಱಗೆಸೆಯೆ ಬೆಳಪನೆಯ್ದುವ ಬೆಳಗಂ
ಪೊಳೆವ ಸುಲಿವಲ್ಲೆ ಮಸುಳಿಸೆ
ವಿಳಾಸದಿಂ ದರ್ಭಶಯನತಳಗತನಾದಂ ೨೪೬

೧. ಸಂ. ೨. ಬಲ್ಲಂ ೩. ಶ್ರುತಿ, ಶೃತಿ, ಸ್ರುತಿ. ೪. ಕಱಿದಪುವಿವೆಂ
೫. ಚಳವೊಂ

### ಸೂತ್ರಂ ೫೪.

ತತ್ಪುರುಷಸಮಾಸದೊಳು
ದ್ಯತ್ಪೂರ್ವಪದಾಂತ್ಯಲೋಪಮುಕ್ಕುಂ ಪ್ರಚುರಂ
ವ್ಯತ್ಪಾದಿಸಲ್ಕೆ ಪಡೆ[1]ಗುಂ
ತತ್ಪರದೊಳ್ ಬೞಿಯಮುಚಿತ ವರ್ಣಾಗಮಮುಂ. ೨೪೭

**ಪ್ರಯೋಗಂ:**

('ಅರಸು–ಮಾವು' ಗಳ ಅಂತ್ಯಲೋಪಕ್ಕೆ)

೧. ಅರನೇಱಿಲ ಪೊಂಬಾೞಿಯ
ಸುರಯಿಯ ಮಾಮರದ ಬಕ್ಕೆ[2]ವಲಸಿನ ಪುದುವಿಂ
ಪರಿ[3]ದುರ್ಬಿದ ಕಟ್ಟಲೆ ದಿನ
ಕರಾಂಶುಗಳ್ಗಂ ವಿಭೇದಿಸಲ್ಕರಿದದೞೊಳ್ ೨೪೮

( ಪ್ರಚುರ ಗ್ರಹಣಕ್ಕೆ )

೨. ಅರಸುಗುಣಂಗಳನತಿಂ ಭೀ
ಕರಕಾಂತಂಗಳನವಂ ವಿಯುಚ್ಚರರಾಜ
ಧರಯಿಸಿದಂ ಜಳನಿಧಿ ಜಳ
ಚರಚಯಮುಂ[4] ರತ್ನಚಯಮುಮಂ ಧರಯಿಪವೋಲ್. ೨೪೯

---

೧. ಪಡು ೨. ಬರ್ಕೆ ೩. ಪರಿ. ೪. ಚಯಮುಂ.



( ಅಪರಾರ್ಥಕ್ಕೆ : ಉಚಿತವರ್ಣಾಗಮಕ್ಕೆ )

೩. ಮಾಂಗಾಯ ಗೊಂಚಲೊಳಗುೞಿ
ದಿಂಗೊರಲಿನಿಂದುಲಿವ ಗಂಡುಗೋಗಿಲೆ[1]ಗಳರ
ಲ್ದೊಂ[1]ಗಲ ನಿಱಿದಳಿರೊಳಗೆ ಜಿ
ನುಂಗುವ ಪೆಣ್ದುಂಬಿಗಳುಮುಳುಂಬಂ ಬನದೊಳ್ ೨೫೦

### ಸೂತ್ರಂ ೫೫

ಪ್ರಾಯಿಕಮುಕ್ಕುಂ ದೀರ್ಘಾ
ಮ್ನಾಯಮುದಂತೆಲ್ಲ ಶಬ್ದದೊಳ್ ವೃತ್ತಿಗತಂ[2]
ಮಾಯೆಂಬುದು ಮಹಿಮಾಭಿ
ಪ್ರಾಯದೊಳೊಂದಿರ್ಕುಮೊಂದಿ
ಮಹತೆಂಬುದಱೊಳ್ ೨೫೧

ಪ್ರಯೋಗಂ ( 'ಎಲ್ಲಾ' ರೂಪಕ್ಕೆ )
ಮಂದಾಕ್ರಾಂತಂ
೧. ಬಲ್ಲಂತೆಂತುಂ ಗುಣಮನೊಳಕೆಯ್ವಾರ್ಪ[3] ನಾರ್ಪಂದದಿಂದಿ
ನ್ನೆಲ್ಲಿರ್ದುಂ ಪೊಲ್ಲಮೆಯನುಗುಗೆಂಬುಕ್ತಿಯಂ ನನ್ನಿಮಾಡ್ಪಂ
ತೆಲ್ಲಾ ರತ್ನಂ[4]ಗಳುಮನೊಳಕೊಂಡೊಳ್ಪನಂಭೋಧಿ ಲೋಕ[4]
ಕ್ಕೆಲ್ಲಂ ಬೀೞಲ್ ಪೊಱಗೆ ಕಸಮಂ ನಿಚ್ಚಮೀಡಾಡುತಿರ್ಕುಂ ೨೫೨

---

೧. ಯನುಲ | ದೊರ್ಂ ೨. ವೃತ್ತಿಗಳಂ ೩. ಕೆಯ್ವಾರ್ಪ
೪. ಲೋಕಂ

(ಪ್ರಾಯೋಗ್ರಹಣಕ್ಕೆ) 'ಎಲ್ಲ' ರೂಪಕ್ಕೆ

೨. ಎಲ್ಲಂಗಮೆಲ್ಲಧನಮುಮ
ನೆಲ್ಲೆಡೆಯೊಳಮೆಲ್ಲತೆಱದೊಳಂ ಕುಡುಗೆಮ [1]ಸಿ
ಕ್ಕಿಲ್ಲ[1]ದೆ ಬವರದೊಳೀಂ ಗಳ
ಗೆಲ್ಲಂಗುಡದಿರ್ಕೆ ಪೊಣರ್ದೊಡಾರ್ಗಂ ಗಂಡಂ ೨೫೩

( ಉತ್ತರಾರ್ಧಕ್ಕೆ : 'ಮಹತ್' 'ಮಾ' ಎಂದಾದುದಕ್ಕೆ)

೩. ಮಾದೇವನುಮಾದೇವಿಗೆ
ಸಾದರದಿಂ ಪೇೞ್ದನೀತ[2]ನುತ್ತಮಸತ್ತ್ವಂ
ಮಾದಾನಿ ಶೌರ್ಯಧನ[3]ನುದಿ
ತೋದಿತಪುಣ್ಯಂ ಹರಿಪ್ರಿಯಂ ನರನೆಂಬಂ. ೨೫೪

ಸೂತ್ರಂ ೫೬.

ಪರಿಗದಿತಬಹುವ್ರೀಹಿಗೆ
ಚರಮದೊಳಕ್ಕುಂ ಯಥಾಪ್ರಯೋಗ[4] ಮಕಾರಂ
ಪರಪದಮಿಲ್ಲೆಂಬೊಂದಿದು[5]
ದೊರೆಕೊಂಡಿರೆ ಲಿತ್ವಮಂತ್ಯವರ್ಣಕ್ಕ[6]ಕ್ಕುಂ ೨೫೫

೧-೧. ಸಿ|ಕಿಗಲ್ಲ. ೨. ಪೇೞ್ದನಿತ್ತ. ಪೇೞ್ದವೀತ. ೩. ಪರ. ೪. ಪ್ರಕಾರ ೫. ಲ್ಲೆಂದಿಂತಿವು. ೬. ವರ್ಣದೊಳ.



ಪ್ರಯೋಗಂ.

(ಬಹುವ್ರೀಹಿಯಲ್ಲಿಯ ಅ ಕಾರಾಂತಕ್ಕೆ)

೧. ಬಲ್ದಲೆಯಂ ತೋೞ್ನೀಳ್ದನ[1]
ಗಲ್ದುರದಂ ಬಟ್ಟದೊಡೆಯುಮಂ ಕೆಂಗಣ್ಣಂ
ನೀಲ್ದ ಕಿವಿಯಾತನೆನಿಸುವ
ನೊಲ್ದೊಲಿಸುಗುಮೆಸೆವ ಬೀರಸಿರಿಯಂ ಧುರದೊಳ್ ೨೫೬

( ಉತ್ತರಾರ್ಧಕ್ಕೆ : 'ಇಲ್ಲ' ಎಂಬುದು 'ಇಲಿ' ಆದುದಕ್ಕೆ )

೨. ಸೊಗಯಿಸುಗುಮೆ ಪಲ್ಲಿಲಿ[2]ವಾ
ಯಗಿಲಿಲಿಗಂಧಂ[2]ಸಮಂತು ಕೂರಿಲಿಕುಡುಗೋಲ್
ಮಿಗೆ ನಾಣಿಲಿಯೆನಿಸುವ ವಧು
ನಗೆಗೆಡೆಯಕ್ಕುಂ ಸಮಸ್ತ ಜಗತೀತಳದೊಳ್. ೨೫೭

ಸೂತ್ರಂ ೫೭.

ಒಂದೆಂಬುದರ್ಕೆ ರೇಫಂ
ಸಂದಿಸುಗುಂ ಕಡೆಯೊಳೆರಡೆನಿಪ್ಪುದಱೊಳ್ ತಾ
ನೊಂದಿ ನೆಲಸುಗುಮಿರಾದೇ
ಶಂ ದಲ್ ಮೇಣ್ ಮೇಣುಕಾರಲೋಪಮದಕ್ಕುಂ ೨೫೮

೧. ಕ್ನೀಲ್ಪನ. ೨-೨. ವಾ|ಯಗಿಲಿಲಿವಣ್ಣಂ; ವಾಯ್ ಪಗಿಲಿಲಿ ವಣ್ಣಂ.

ಪ್ರಯೋಗಂ

('ಒಂದು' ಎಂಬುದು ಸ್ವರಪರವಾಗೆ 'ಒರ್' ವ್ಯಂಜನ ಪರವಾಗೆ 'ಓರ್' ಎಂದಾದುದಕ್ಕೆ)

೧. ಓರೆಂಜಲ್ಗೊ[1] ರ್ಪಂತಿಗೆ
ವಾರದ ಖಳರೊಡನೆ ಬೆರಸಿ ಮೇಳಂ[2] ಗೊಂಡಂ
ದಾರುಂ ಲಘುವಪ್ಪರ್ ಪ್ರ
ಸ್ತಾರದೊಳಮದೆಂಬ ಶಿಥಿಲಸಂಯೋಗದವೋಲ್ ೨೫೯

('ಎರಡು' 'ಇರ್' ಎಂದಾದುದಕ್ಕೆ)

೨. ಇರ್ಮೆಯ್ಗ್ಗಂ[3] ಹಿತಮಂ ಜಿನ
ಧರ್ಮಮನಿಂಬಾಗಿ ತಿಳಿದು ನೆಗಬ್ಗಂ[4] ಗಕ್ಕುಂ
ಸ್ವರ್ಮೋಕ್ಷಸಿದ್ಧಿ ಬಗೆವಂ
ದಾರ್ಮಂ ಪೆಜತಿಲ್ಲ ದೇಹಿಗೀ ಸಂಸೃತಿಯೊಳ್ ೨೬೦

(ಉ ಕಾರ ಲೋಪಕ್ಕೆ)

ಮತ್ತೇಭವಿಕ್ರೀಡಿತಂ :

೩. ಗೆಲವಂ ಕೊಂಡಭಿಮಾನಿಯಾದನೊಳಕೊಂಡನ್ಯಾವನೀಕಾಂತೆಯಂ
ಸಲೆ ಶೌಚವ್ರತಿಯಾದ[5] ನಿರ್ತೆಱದೆರಬ್ಮಾತಾಡಿ[6]
ಬಟ್ಟಿಂ ಜಗದ್-
ವಲಯಕ್ಕೊರ್ನುಡಿಕಾ[6] ಱನಾದನನಯ[7] ಕ್ಕಳ್ಳಿಕ್ಕಿ
ಸಂಗ್ರಾಮದೊಳ್
ಕಲಿಯಾದಂ ವಿಪರೀತಜಾತಚರಿತಂ ಭೂಪಾಲರೊಳ್
ಕಾಮದಂ ೨೬೧

---

೧. ಲ್ಗೊ. ೨. ಮೆಳ್ತಂ. ೩. ಮೆಯ್ಯಿಂ ೪. ನೆಗಳ್ಗಂ ೫-೫. ನಿಶ್ತಱಿವೆರಬ್ಮಾತಾಗಿ. ೬. ಗಾ. ೭. ನಯರ.



ಸೂತ್ರಂ ೫೮

ಅದಿದೆನ್ನ ದೆಮೂಱೆಂಬೀ
ಪದದಂತಂ ಲೋಪಮೆಯ್ದುಗುಂ ಕಪವರ್ಗಂ
ತುದಿ[1] ಯೊಳೆ ಪೊದಲ್ದುಂ[1] ಪುದಿದಿರೆ
ತದಾಗಮಂ ಹ್ರಸ್ವಪೂರ್ವಮಕ್ಕುಂ ಬಹುಳಂ. ೨೬೨

ಪ್ರಯೋಗಂ

('ಮೂಱು' ಎಂಬುದಱ ಅಂತ್ಯಾಕ್ಷರ ಲೋಪಕ್ಕೆ)

ಮತ್ತೇಭ ವಿಕ್ರೀಡಿತಂ

೧. ನೆಲಸಿರ್ದಪ್ಪುದಧಃಸ್ಥಳಂಬಿಡಿದಧೋಲೋಕಂ
ಸಮಂತೆಯ್ದೆ ಸು
ತ್ತಲುಮಿರ್ದಪ್ಪುದು ಮಧ್ಯಲೋಕಮೆಸೆದಿ[2] ರ್ದಾ ಚೂಳಿಕಾ
ಭಾಗದಾ
ದಲೆಯೊಳ್ ನಿಂದಪು[3] ದೂರ್ಧ್ವ ಲೋಕಮೆನೆ ಮೂಲೋಕಕ್ಕೆ
ಪೆಂಪಿಂದಗುಂ
ದಲೆಯಾಗಿರ್ದುದು ದೇವದಂಪತಿರತ ಶ್ರೀಸುಂದರಂ
ಮಂದರಂ ೨೬೩

(ಪಂಪನ ಆದಿಪುರಾಣ ೧-೫೦)

(ಅಪರಾರ್ಥಕ್ಕೆ 'ಮೂಱು' 'ಮು' ಆದುದಕ್ಕೆ)

ಉತ್ಪಲಮಾಲೆ.

೨. ಮುಕ್ಕೊಡೆ ಪುಷ್ಪವೃಷ್ಟಿ ಸುರದುಂದುಭಿ ಕೇಸರಪೀಠ
[4] ಮೊಂದಿದಂ
ತಿಕ್ಕುವ[4] ಚಾಮರಂ ಮಿಱುಪ ಪೂಗಳ ಗೊಂಚಲಶೋಕೆ
ಭಾನುವಂ[5].

---

೧-೧ ಯೊಳ್ ತಗುಳ್ದು. ೨. ಮೆಸಿಸಿ. ೩. ನಿಂದುದ ೪-೪. ಮೊಂದೆಕಂ। ದಿಕ್ಕುವ. ೫. ಭೂಷಣಂ; ಭಾಷಣ

ಮಿಕ್ಕು ತೊ[1]ಳಪ್ಪ ಭಾವಳಯವೊಪ್ಪುವ ಪನ್ನೆರಡುಂ
ಗು[2]ಣಾಳಿ ಲೋ
ಕಕ್ಕೆ ವಿನೂತವೀರಜಿನಪಾಶ್ರಯಮೆಂಬಿವು[3] ಸರ್ವಮಂಗಳಂ ೨೬೪

೩. ಅನವರತದಾನದಿಂ ಮಿ
ಕ್ಕನೂನಸೂನೃತದಿನಸಮ[4] ಶೌರ್ಯೋನ್ನತಿಯಿಂ
ವನನಿಧಿಪರೀತಸಕಲಾ
ವನಿಯೊಳ್ ಮುಪ್ಪುರಿವೊಲಾದುದಾ ನೃಪನ ಗುಣಂ ೨೬೫

ಶಾರ್ದೂಲವಿಕ್ರೀಡಿತಂ. ( ಬಹುಳಕ್ಕೆ )

೪. ತೀವಿರ್ದತ್ತು ಮೊದಲ್ ಮೊದಲ್ಗೆ[4] ಪಣೆಯುಂ[5]
ಮೂಗಯ್ಯ ಮೂಗಯ್ಯ[6] ನಿ
ತ್ತಾವರ್ಕೆಯ್ದೆ ಕವಲ್ ಕವಲ್ತು ಫಲವುಂ ಕೊಂಬಾದು
ವೊಳ್ಗೊಂಬುಗಳ್[7]
ತೀವಿರ್ದತ್ತು ತಳಿರ್ ಮೊದಲ್ ಪಣೆ ಕವಲ್ಗೊಂಬೆಂಬುವೀ
ಕೆಂದಳಿರ್
ಮಾವಿಂಗಲ್ಲದೆ ಪೂವುಗಳ್ಗೆ ಪೆಱವರ್ಕಿಂತೇಂ ಬೆಡಂಗಕ್ಕುಮೇ ೨೬೬

(ಪಂಪನ ಆದಿಪುರಾಣ ೧೧-೯೭)

---

೧. ಬೆ. ೨. ಗ ೩. ವೆಂದಿವು ೪. ನೆಸೆವ ಮೊದಲೆ ೫. ಪಣೆಯಿಂ ೬. ಯ್ಯಾ. ೭. ವೊಳ್ಗೊಂಬುಮಂ.



## ಸೂತ್ರಂ ೫೯.

ಉಪಹತಿ ನಾಲ್ಕಲ್ದೆಂಬಿವ
ಱುಪಧೆಯೊಳಾ[1]ಱೆಂಬಿದಕ್ಕೆ ಮೊದಲೊಳ್ ಹ್ರಸ್ವಂ
ಸ್ವಪರಸ್ವರಲೋಪಂ[2] ವ
ರ್ತಿಪುದೇೞಱೊಳಂತ್ಯಲೋಪಮೆಂಟಕ್ಕ[3]ಕ್ಕುಂ ೨೬೭

ಪ್ರಯೋಗಂ

('ನಾಲ್ಕು-ಅಯ್ದು-ಆಱು-ಏೞು-ಎಂಟು' ಎಂಬಿವು ಕ್ರಮವಾಗಿ
'ನಾಲ್-ಅಯ್-ಅಱು-ಏೞ್-ಎಣ್' ಎಂದು ಆದುದಕ್ಕೆ)

೧. ಉರಗಂ ಕೊಂಡಲ್ಲಿಂ[4] ನಾ
ಲ್ವೆರಲನಿತಂ ಕಳೆದು ಕಟ್ಟಿ ಮೇಗಂ ಬೇಗಂ
ಸೆರೆವಿಡುಗೆ ಸುಡುಗೆ ಕಡಿದಿರ
ದರಿದಿಕ್ಕುಗೆ [5]ನೀವಿ ಕಳೆಗೆ[5] ನಿರ್ವಿಷಮಕ್ಕುಂ. ೨೬೮

೨. ಕಿಱು ಪುಗಲೆನೆಯುಮೆಂತುಂ
ಮೀಱಿದನಂ ಪೊಕ್ಕು ಶಾಲೆಯಂ ಶಾರ್ಙ್ಗಮನಂ
ದೇಱಿಸಿದಪನಹಿಶಯ್ಯೆಯ
ನೇಱಿದನಯ್ವಾಯ ಶಂಖಮಂ ಪೂರಿಸಿದಂ ೨೬೯

೩. ಅಱುದಿಂಗಳಾಯುವುಂಟೆನೆ[6]
ಮಱುಗುವುದುಂ ನಲ್ಲರಲ್ಲಿ[7] ತಮ್ಮಿಂ ಮುನ್ನಂ
ಪಱಿವಟ್ಟು ಬರಿ ಕನಲ್ವುದು
ಮಱಪದೆ ನಾಲ್ವರ್ಗೆ[8] ನರಕದುಃಖ[9]ದ ತೆಱನಂ ೨೭೦

---

೧. ಯಿನಾ ೨. ಸ್ವರವಗಂ ೩. ರ್ಕಕ್ಕುಂ ೪. ಲ್ಲಿಗೆ. ೫-೫. ಗಿವಿಯು ಗಳಿಗೆ; ಗಿಳಿಯು ಕಳೆಗೆ ೬. ವೊಂದೆನೆ; ಮುಂಟೆನೆ ೭. ಳಲ್ಲಿ ೮. ಸುರಜನರ್ಗೆ ಕಲ್ಪಜರ್ಗೆ ೯. ಕ್ರಮಮುಂ.

೪. ಪರಿಮರ್ದಿ[1]ಸುವುದು ದುತ್ತೂ
ರರಸಮನಿಂಬಾಗಿ[1] ಪಿಡಿದು ನೆಲದೊಳ್ ಲವಣಂ
ಬೆರಸೊರಸಿಕೊಂಡು ಪೂಸುಗೆ
ಕರಗುಗುಮೇಟಿಪ್ಪೊರೆಯೆನಿಪ್ಪ ಕುರುವುಂ ಕ್ಷಣದೊಳ್[2] ೨೬೧

೫. ಕಣ್ಗೆ ದಱಿದೊಡನೆ ನಾಲ್ವ
ತ್ತೆಣ್ಗಾವುದವರೆಗಮುಗಿದೊಡಂಬುಧಿ ಕಡಲ
ತ್ತಣ್ಗೆ ಹರಿ ಬಂದು[3]ದಂ ಕಡು[3]
ಜಾಣ್ಗೆಡದಱಿದಾಗಳವಧಿಬೋಧೋದಯದಿಂ ೨೬೨

## ಸೂತ್ರಂ ೬೦.

ಒಂಬತ್ತು ದಶಾಹತಿಯಿಂ
ತೊಂಬತ್ತೆನೆ ಸಲ್ಗುಮಗ್ರದೊಳ್ ನೂಱಿರೆ ಮು
ತ್ತೊಂಬಯ್ಯಾದೇಶಮನವ
ಲಂಬಿಸುಗುಮದಂತೆ ಮುಂತೆ ಸಾಸಿರಮಿರೆಯುಂ. ೨೬೩

ಪ್ರಯೋಗಂ.

('ಒಂಬತ್ತ'ಱ ರೂಪಗಳ್)

೧. ಸಾಸಿರಯೋಜನಮುಮರ್ದು[4] ಸು–
ರಾಸುರಸಂಸೇವ್ಯವಾಗಿ ತೊಂಬತ್ತೊಂಬಯ್–

---

೧–೧. ಸಿ ದುತ್ತೂರ।ಸ್ವರಸಮನಿಂ ಬಾಗೆ. ೨. ಬೇಗಂ ೩–೩. ಕಂಡೊಡೆ
೪. ಜನಮುಬ್ಬಿ.



ಸಾಸಿರ ಯೋಜನಮಂ ನೆಗೆ
ದೀ ಸುರಗಿರಿ ಪೆಂಪನೇಂ[1] ಪುದುಂಗೊಳಿಸಿದುದೋ ೨೬೪
(ಪಂಪನ ಆದಿಪುರಾಣ ೭–೬೩)

## ಸೂತ್ರಂ ೬೧

ಒಂದೆರಡೆಂಬಿವು ಪರದೊಳ್
ಸಂದಿಸೆ ಪತ್ತರ್ಕೆ ಪನ್ನೆನಿಕ್ಕುಂ ರೂಪಂ
ಮುಂದೆ ಪೆಱತೊಂದಿ ನಿಲೆ ಪದಿ
ಯೆಂದಕ್ಕುಂ ಸ್ವರದೊಳಮರ್ದು ನಾಗಮುಮಕ್ಕುಂ ೨೬೫

ಪ್ರಯೋಗಂ

('ಪತ್ತು' 'ಎಂಬುದು' 'ಪನ್'–ಪದಿ ಎಂದಾದುದಕ್ಕೆ)

೧. ಎನಗಿದು ಚೋದ್ಯಂ ಪನ್ನೊಂ
ದನೆಯದು ನೆಲೆ ತನ್ನ ನೆಗಟ್ಟುದಂತದು ಪದಿನಾ
ಱನೆಯ ನೆಲೆಗುಯ್ದು[2]ದೆಂಬುದ
ನೆನೆ ಸುವಿಧಿನರೇಂದ್ರನಚ್ಯುತೇಂದ್ರನುಮಾದಂ ೨೬೬
(ಪಂಪನ ಆದಿಪುರಾಣ ೬–೧೨)

ಶಾರ್ದೂಲವಿಕ್ರೀಡಿತಂ

೨. ಸಾರಲ್ ಸಲ್ಲದು ಪನ್ನೆರಟ್ಬರಿಸಮಂ ನಾಡಂತೆ[3]ಡಂ ಗಿರ್ವುದು
ಗ್ರಾರಣ್ಯಂಗಳೊಳೆತ್ತಮೊಂದು ಬರಿಸಂ ಮೆಯ್ದೊಱಲಾಗಾರ್ಗ[4]ಮಂ

---

೧. ಪೆಂಪದೇಂ. ೨. ಗುಯ್ದನೆಂ ೩. ನಾಡತ್ತಂ. ೪. ಲಾನಾರ್ಗ

ದಾರಯ್ದಾರ್ತಡ ಮಾಡಿದಂದು[1] ಮಗುಳ್ದತ್ತೀರಾಜುವರ್ಷಂಬರಂ
ಸಾರಲ್ ಸಲ್ಲದು ನಾಡನೆಂಬ ಸಮಕಟ್ಟೆಂತಾ
ದೊಡೆಂತಕ್ಕುಮೋ ೨೭೭

**ಸೂತ್ರಂ ೬೨.**

ಸಾಸಿರಮಿರೆ ಮುಂದೊತ್ತಿ ಸ
ಮಾಸದೊಳಕ್ಕುಂ ಪಯಿನ್ನದರ್ಕೆ ಯಥೋಕ್ತಂ
ಶಾಸಿಸುವರ್ ನೂಱರ್ಕಂ
ಸಾಸಿರಕಂ ಪ್ರಾಂತಲೋಪಮುಂ ಕೆಲವೆಡೆಯೊಳ್ ೨೭೮

**ಪ್ರಯೋಗಂ**

('ಸಾಸಿರಂ' ಪರವಾಗೆ 'ಪತ್ತು' ಎಂಬುದು 'ಪಯಿನ್' ಎಂದಾದುದಕ್ಕೆ)

**ಮತ್ತೇಭವಿಕ್ರೀಡಿತಂ.**

೧. ಪಿಡಿಯೆಂ ಚಕ್ರಮನೆಂಬ ಚಕ್ರಿಯ[2] ನಿಳಾಚಕ್ರಂ
ಭಯಂಗೊಳ್ವಿನಂ
ಪಿಡಿಯಿಪ್ಪೆಂ ಕರಚಕ್ರಮಂ ನರರಥಂ ತೂಳ್ದಾ ಕುರುಕ್ಷೇತ್ರದಿಂ
ಪಡು[3]ವೆಣ್ಗಾವುದವೋಗೆ ಪೋಗಲಿಸುವೆಂ[3] ನಿಚ್ಚಂ ಧರಾಧೀಶರಂ
ಪಡಲಿಟ್ಟಂತಿರೆ [4]ಮಾಟ್ಪೆನೋವದೆ ಪಯಿಂಛಾಸಿರ್ವರಂ[4]
ಯುದ್ಧದೊಳ್ ೨೭೯
(ಪಂಪನ ವಿಕ್ರಮಾರ್ಜುನ ವಿಜಯ ೧೦–೨೫)

---

೧, ತಡೆದಂದು ತಂದು. ೨. ಚಕ್ರಿಯಿ ೩–೩. ವೆಣ್ಗಾವುದು ಪೋಗೆ ಪೋಗಡಿಸುವೆಂ ೪–೪. ಕೊಲ್ವೆ ನಾನಯುತಮಂ ಭೂಪಾಲರಂ



(ಅಪರಾರ್ಧಕ್ಕೆ)

**ಸ್ರಗ್ಧರೆ**

೨. ಒರ್ವಂ ಬಂದೊಂದೆ ತೇರೊಳ್ ನೆರೆದ ಕುರುಬಲವ್ಯೂಹಮಂ
ಕೀಱಿ ಬೆಂಕೊಂ[1]
ಡುರ್ವೀಶಂ[1] ನೋಡೆ ಮಾಱಾಂತೆನಗಮರಿಯ[2] ನಾಗಿರ್ದನೀ
ಮಿಟ್ಟಿಗೊಡ್ಡಂ
ಸರ್ವರ್ಗಂ ಸಲ್ಲದೆಂದೆಂದೊವಜನೊದಱಿ ನಿಂದೊರ್ವನುಂ
ನೂಱುನೂರ್ಛಾ
ಸಿರ್ವರ್ ದ್ರೋಣರ್ಕಳಾದಂತಿಸೆ[3] ಮೊಗಸಿ ಸರಲ್
ಪಾಯ್ದುವಂದತ್ತಮಿತ್ತಂ ೨೮೦

೩. ಸಾಸಿರ್ವರ್ ವನಿತೆಯರಯ್–
ಸಾಸಿರ್ವರ್ ಪ್ರಿಯತನೂಜರಱಿಕೆಯ ಪದಿನೆಣ್–
ಛಾಸಿರ್ವರರಸುಗಳ್ ವೆರ
ಸಾ ಸಾಸಿಗನುಚಿತ ದೀಕ್ಷೆಯಂ ಕೆಯ್ಕೊಂಡಂ ೨೮೧
(ಪಂಪನ ಆದಿಪುರಾಣ ೬–೫)

**ಸೂತ್ರಂ. ೬೩**

ಬೆರಸಿ ಸಮಸಂಸ್ಕೃತಂಗಳ್
ಬರೆಕನ್ನಡದೊಡನೆ[4] ಸಮತೆಯಿಂದಂ ಸಲ್ಗುಂ
ನಿರವದ್ಯಮಾಗಿ ಪದವಿಧಿ
ವಿರುದ್ಧಮಕ್ಕುಂ ತದನ್ಯಥಾವೃತ್ತಿಗಳೊಳ್ ೨೮೨

---

೧-೧. ಮಾಱಾಂ।ತುರ್ವೀಶಂ; ಮಾಂಱಾ।ತುರ್ವೀಶರ್. ೨. ಮತಿಯ
೩. ತಿರೆ, ೪, ದೊಳಗೆ

ಪ್ರಯೋಗಂ.

೧. ಅರಸುಗುಣಂ ಪಟಿಯನಣಂ
ಬರಲಿತ್ತುದೆ ಶೌಚದಳವು ಪರವೆಣ್ಗಳಿಸಂ
ತರಲಿತ್ತುದೆ ಅಟಿಜನದೊಳ್
ಬೆರಸಿರಲಿ[1]ತ್ತುದೆ ಮಹಾನುಭಾವಂ ನೃಪನಾ ೨೮೩

( ವಿರುದ್ಧಕ್ಕೆ )

ಮಹಾಸ್ರಗ್ಧರೆ

೨. ತರವೇಟ್ ಮಾಣಿಕ್ಯ ಭಂಡಾರದ ಪುಡಿಕೆ[2]ಗಳಂ
ಪುಂಜಿಸಲ್ ವೇಟ್ ಸುವರ್ಣೋ
ತ್ಕರಮಂ ತೋಟಲ್ಕೆ ವೇಟ್ ದಂತಿಗಳನಿರಿಸ ವೇಟ್ ಮುಂದೆ
ವಾಹಂಗಳಂ ಬಿ
ತ್ತರಿಸಲ್ ವೇಟ್ ಚಿತ್ರಚೀನಾಂಬರ ಪರಿಕರಮಂ
ಮಾಣದೆಂದೋಳಿಯಿಂ ಲೆಂ
ಕರನಾಗಲ್ ಪೇಟ್ಬ್ ನೀಯಲ್ಕೆರೆದ[3] ವರ್ಗೆ ಮಹಾದಾನಮಂ
ವಿಕ್ರಮಾಂಕಂ ೨೮೪

(ಇಲ್ಲಿ ಕೆಲರ್ 'ತುರಗ-ಅಸಿ' ಶಬ್ದಂಗಳೊಳ್ ಸಮತೆಯ
ಮಾಣನಿಚ್ಛೈಸುವರರ್ಕೆ ಲಕ್ಷ್ಯಂ)

೩. ತುರಗದಟಂಗಳ್ ಕವಿತರೆ
ತುರಂಗ ಮಾರೂಢನಾಗಿ ತನ್ನಯ ಹಯಮಂ
ಪರಿಯಿಸಿ ಕೊಂಗುಳಿವರ್ಮಂ
ಕರಾಸಿಯಿಂದಿಱಿದು ತವಿಸಿದಂ ಹಯಬಲ್ಲಮಂ ೨೮೫

---

೧. ಬೆರಸಲ್ಕೆ ೨. ಪುಟಿಕೆ; ೩. ನೀಯಲ್ಕವರ; ನೀಯಲ್ಕಾರ.



೪. ಕೂರಿಸಿ ವೀರ[1]ಶ್ರೀಯಂ
ಕೂರದರಂ ಕೊಂದು ಸಮರಜಯಮಂ ಮಾಡಲ್
ಕೂರಸಿಯೊಳ್ ನೆಲಸುಗೆ ಕಂ
ಠೀರವವಾಹನೆ ಚಳುಕ್ಯಕಂಠೀರವನಾ ೨೮೬

(ರನ್ನನ ಗದಾಯುದ್ಧ ೧-೫)

ಸೂತ್ರಂ ೬೪

ಚಾಪಲ ವೀಪ್ಸಾಭೀಕ್ಷ್ಣ್ಯ[2]ಸ
ಮೀಪಾನುಕೃತಿ ಕ್ರಿಯಾಸಮಭಿಹಾರಾದಿ
ವ್ಯಾ[3]ಪನೆಯೊಳ್ ಪದಕ[4]ಕ್ಕುಂ
ರೂಪದ್ವಿತ್ವಂ ಯಥಾಪ್ರಯೋಗಾನುಗತಂ ೨೮೭

ಪ್ರಯೋಗಂ.

(ಚಾಪಲಕ್ಕೆ)

೧. ಅದಱಿಂದಮೊಪ್ಪಿಸೊಪ್ಪಿಸು
ಸುದತಿಯನಣ್ಣಣ್ಣ ಸಾರ್ಚು ಸಾರ್ಚೆಲೆ ಎಲೆ ನೀ
ನದಿರದೆ ನಿಲ್ ನಿಲ್ ನೀನಿ
ಲ್ಲದಿರ್ಚಿದಿರ್ಚೆನೆ ಜಟಾಯು ರಾವಣನೆಂಗುಂ. ೨೮೮

---

೧. ವಿಜಯ ೨. ಬೀಕ್ಷ್ಣ. ೩. ಬ್ಯಾ. ೪. ದದ

ಮತ್ತೇಭವಿಕ್ರೀಡಿತಂ.

೨. ಮುದ[1] ಮೂರೂರಬಲಾಜನಕ್ಕೆ ಪರಿನೀರೂರೂರ
ತೋಂಟಕ್ಕೆ ಸಂ
ಪದಮೂರೂರ ಗೃಹಕ್ಕೆ ಪಂಕಜದ ಚೆಲ್ವೂರೂರ ಗುಯ್ಯಲ್ಗೆ ಸಂ[2]
ಮದ[2] ಮೂರೂರ ಮದಾಳಿಗಂಚೆಗಳ ಪೆಂಪೂರೂರ[3] ಷಂಡಕ್ಕೆ ಪಾ
ಲೊದವೂರೂರ ದನಕ್ಕ ಶರ್ಕ್ಯಮದಜಿ೦ ರಯ್ಯಂ[4]
ತದುರ್ವೀತಳಂ೨೮೯

(ಅಭೀಕ್ಷ್ಣ್ಯಕ್ಕೆ)

ಚಂಪಕಮಾಲೆ

೩. ಗಿಳಿಯೊಳಸನೋದಿಯೋದಿ ನುಡಿಗಲ್ತು ಮದಾಲಸರಾಜಹಂಸಮಂ
ಡಳಿಯೊಡನಾಡಿಯಾಡಿ ನಡೆಗಲ್ತು ಕಳಾಪಿಗಳಾಟಮಂ ಮನಂ
ಗೊಳೆ ನಡೆ[5] ನೋಡಿ ನೋಡಿ ಕುಣಿಯಲ್ ನೆಱ[3] ಕಲ್ತು
ಕಲಾಗುಣಂ ಪೊದ
ಬ್ದಳವಡೆ ಬಾಲಭಾವದೊಳೆ ಬಾಲಕಿಯರ್ ಬಳೆವರ್
ನಿರಾಕುಳಂ[6] ೨೯೦

(ಸಮೀಪಕ್ಕೆ)

೪. ಆಟಾವು ಕೊಲೆ ಕಳವು ಪುಸಿಯುವ
ಗಟಿಯಂ ಪಟಿಯೆಂಬ ದೋಷದೊಳ್ ಪೊರೆದ ನರಂ
ಕೆಟಕೆಟಿಗೆ ನರಕಬಿಲದೊಳ್
ಗಟಿಗಟಿನಿಟಿಗುಂ ರಸಾಂತಮಂ ತಾಗುವಿನಂ[7] ೨೯೧

(ಅನುಕೃತಿಗೆ)

೫. ವಿನುತ ಕ್ರೌಂಚಾಚಳರಂ
ಧ್ರನಿಕಟದಿಂ ಮೊಗಸಿ ಬರ್ಪ ಹಂಸಾಳಿಯನಂ
ದನುಕರಿಸಿ ಪರಿದು ಭೋರ್ ಭೋ
ರೆನೆ ಪಾಯ್ದುದು[8] ಹಿಮನಗಕ್ಕೆ ಗಂಗಾಸ್ರೋತಂ ೨೯೨

೧. ಮದ ೨-೨ ಯಸಾಸ್ಪದಂ. ೩. ಚೆಲ್ವುರೂರ ೪. ರಮ್ಯಂ ೫. ವೆ೦ಗೆ. ೬. ನಿರಂತರಂ ೭. ತಾಪಿನೆಗಂ ೮. ಪಾಯ್ವು.



(ತ್ರಿಪ್ರಯೋಗಮುವಿೞ್ತಿ ಸಾಧುವ[1]ಕ್ಕುಂ)

೬. ಬೆಳೆಗೆಯ್ಗೆ ಳೊಳಿರ್ದೆತ್ತಿಂ[2]
ಕಳರವದಿಂ ಕೆಯ್ಯನೆತ್ತಿ ಪಯಲಲ್ಲೆನುತುಂ
ಬಳೆಗಳ್ ಘುಲ್ ಘುಲ್ ಘುಲ್ಲೆನೆ[3]
ಗಿಳಿಸೋವಾಕೆಗಳಿನೊಪ್ಪುಗುಂ ಕೆಲವೆಡೆಯೊಳ್ ೨೯೩

(ಕ್ರಿಯಾಸಮಭಿಹಾರಕ್ಕೆ)

೭. ಅಡವಿ ಬಯಲಾಗೆ ನದವೊ
ಟ್ಟುಡುಗೆ ತೆಮರ್ ಸರಿಸಮಾಗೆ ಬಟ್ಟೆಯೊಳೆಲ್ಲಂ
ನಡೆ ನಡೆಯೆಂದೇ ನಡೆದುದೊ
ಪಡೆ ಪಡೆದಚ್ಚರಿಯನಾ ಸುರಾಪಗೆವರೆಗಂ[4] ೨೯೪

(ಆದಿಗ್ರಹಣಕ್ಕೆ)

೮. ಅಂತೆಂತೆನೆ ಪರಿಚಾರಕಿ
ಗಿಂತೆಂದಂ ಬ್ರಹ್ಮಚಾರಿ ಕಳೆ ಕಳೆ ಸಿತಗಂ
ಗಿಂತು ಕಿಡಿಸುವುದೆ ತಪಮನ
ದೆಂತುಂ ಗಿರಿಸುತೆಯ ಬಯಸಲಾತಂ ದೊರೆಯೇ ೨೯೫

## ಸೂತ್ರಂ ೬೫

ಪಲ್ಲಟಿಸಿ ಡಕಾರದ ನೆಲೆ
ಯಲ್ಲಿ ಟಕಾರಂ ಱಕಾರದೊಳ್ ರೇಫಂ ತಾ

೧. ಸಾರ್ಥಕಮಕ್ಕುಂ ೨. ದೆ೯ಂತಂ. ೩. ಘುಲ್ಲೆನೆ ೪. ಧರೆಗಂ

ನೆಲ್ಲಿಯುಮಕ್ಕುಂ ಪದವಿಧಿ
ಯಲ್ಲಿ ಪರಂ ವ್ಯಂಜನಾದಿಯಾಗಿರೆ ಬಹುಳಂ ೨೯೭

ಅದೆಂತೆಂದೊಡೆ

ಸೂತ್ರಂ ೬೬.

ಕಾಡುಂ ಕೋಡುಂ ನಾಡುಂ
ನೀಡುಂ ನಾಮಂಗಳೊಳ್ ಕ್ರಿಯಾರ್ಥಂಗಳೊಳಂ
ಮಾಡುವುದುಂ ನೋಡುವುದುಂ
ಬೇಡುವುದುಂ ೞತ್ವವಿಧಿಗೆ ಪರಿಗಣಿತಂಗಳ್ ೨೯೮

(ಅನಿತರ್ಕಂ ಯಥಾಕ್ರಮದಿಂ ಪ್ರಯೋಗಂ)

೧. ಕಾೞ್ಕಿಚ್ಚು ತಗುಳೆ ತವ್ಮೊಳ್
ಕೋೞ್ಕುಟ್ಟೆ ವನದ್ವಿಪೇಂದ್ರಚಯಮತಿಭಯದಿಂ
ನೀೞ್ಕರಿಸಿ[1] ನಿಲ್ಲದೆನಸುಂ
ನಾೞ್ಕುಡಿವೋ[2]ಪಂತೆ ಪೋಪುದೀ[2] ನಗತಟದಿಂ

ಉತ್ಪಲಮಾಲೆ.

೨. ಕಾೞ್ಪಿರವಾಗೆ ಕಾವ್ಯರಸ[3]ಮರ್ಥಮುಮಕ್ಕರಮುಂ[3] ಪ್ರತೀತಿಯಂ
ಮಾೞ್ಪಿನೆಗಂ ಜಲಕ್ಕನಿರೆ ಪೇ[4]ೞದೆ ಕೆಮ್ಮನೆ ಗಂಟುವೇ[5]ೞ್ದು ಚಿಃ
ನೋೞ್ಪುದೆ ಮುಯ್ವನಾ ಕೃತಿಗೆ ಪಂ[6]ಜಿಕೆ ವೇೞ್ಪುದದರ್ಕೆ ಟಿಪ್ಪಣಂ
ಬೇೞ್ಪುದು ಟೀಕು ಬೇೞ್ಪುದೆನೆ ಪೇೞ್ದ[7]ವನುಂ
ಕವಿಯೆಂಬ ಲೆಕ್ಕ[7]ಮೇ ೨೯೯

೧. ಕಿಚ್ಚಿಲಿಸಿ. ೨-೨. ಪೋಪಂತೆ ಪೋಪುವಿ. ೩-೩. ದರ್ಥಮನಕ್ಕರಮಂ. ೪. ಪೇೞ್ಪುದು. ೫. ನೋಱಂಟು. ೬. ಪಂಚಿಕೆ ೭-೭. ನಂ ಕವಿಯೆನ್ನ ಬರ್ಕು.



( ಅಲ್ಲಿ ರೇಫಕ್ಕೆ )

೨. ಮಾರ್ಪಡಿಯೆ ಮಾಣನೀ ಭಟ
ನೇರ್ಪಸವಿಗನೀತನಿದಿರ್ಗೆ ಬರ[1]ಲಾರ್ಪವರಾರ್
ಮಾರ್ಪಡೆಯೊ[2]ಳೆನ್ನ ಘನದೋ[2]
ರ್ದರ್ಪಮನಾವರಿಸಿ ನೆಗೞ್ದ ಕಲಿ[3] ರಣವಜ್ರಂ ೩೦೦

ಸ್ರಗ್ಧರೆ. ( ಬಹುಳ ಗ್ರಹಣಕ್ಕೆ )

೪. ಪೇೞಿ್ದರ್ಪತ್ತುತೋಳುಂ ದಶಮುಖಕುಹರಾ[4]ಟೋಪಮುಂ
ಮಿೞ್ತು ರೂಪಂ
ತೋೞಿ್ದರ್ದಂತಿರ್ದ[5] ರೂಪುಂ ಹರನಿದಿರೊಳಗುರ್ವಪ್ಪಿನಂ
ಪೊಣ್ಮಿದಣ್ಮಾ
ಬೀಱುತ್ತಂ ದೇವನಂ ಮಚ್ಚಿಸಲವಯವದಿಂದೊಂದೆರೞ್
ಮೂಱು ನಾಲ್ಕು
ಯ್ದಾಱೇೞೆಂಟೊಂಬತೆಂದಿಂತರಿಗುಮೆ ತಲೆಯೊಂಬತ್ತುಮಂ[6]
ದೈತ್ಯರಾಜಂ ೩೦೧

ಸೂತ್ರಂ ೬೭.

ಕೆಲಬರುಪಾಂತ್ಯದ ಕಾರದ
ನೆಲೆಯೊಳೊಕಾರಂ ವಯದ್ವಯಕ್ಕೌದೈತ್ವಂ
ಸಲೆ ಕೂಡೆ ಣಕಾರಂ ಕೇ
ವಲಂ ನಕಾರಕ್ಕೆ ಣತ್ವಮಕ್ಕುಮದೆಂಬರ್ ೩೦೨

೧. ವರ. ೨. ಅನ್ನಪದದೋ. ೩. ಕಲಿ ೪. ಮುಖರಾ ೫. ತಪ್ಪ. ೬. ಯಂ ಪತ್ತುಮಂ.

ಪ್ರಯೋಗಂ :

(ಉಪಾಂತ್ಯದ ಅ ಕಾರಂ ಒ ಕಾರವಾದುದಕ್ಕೆ)

೧. ಆವೊಂ ಕಾವೊಂ ಲೋಕಮ
ನಾವೊನಿನಮರರ್ಕಳಮರರೆನಿಸಿದರೊಲವಿಂ
ದಾವೊನುರಃಸ್ಥಳದೊಳ್ ಲ
ಕ್ಷ್ಮೀವಧು ನೆಲಸಿರ್ಪಳಾ ಮುರದ್ವಿಷನೀತಂ ೩೦೩

( ವಕಾರದೌತ್ವಕ್ಕೆ )

ಚಂಪಕಮಾಲೆ.

೨. ಕಸವರದಾಸೆಯಿಂ[1] ಪ[2]ದೆಪುದೋರ್ಪ‌ಟ[3]ವೆಂಡಿರ
ನಲ್ಮೆಯೆಂದು ಭಾ
ವಿಸದಿರು ನೀಂ ಮನೋಜಯನವಲ್ಲಭ ಕೂರಿಸಿ ಕೂರ್ತ
ನಿನ್ನ ಮೆಯ್
ಕಸವರಮೆನ್ನ ನಿನ್ನ ಸಿರ ದೌದಲೆಗಾಣ್ಬೆನ[3] ಮೆಂದೆ ನಂಬು ಚೀ
ಕಸವರಬೇಟಮೆಂಬುದೆರೆಕೊಳ್ವರ ಬೇಟಮದೆನ್ನ ಬೇಟಮೋ ೩೦೪

(ಯಕಾರದೈತ್ವಕ್ಕೆ)

ಮತ್ತೇಭವಿಕ್ರೀಡಿತಂ

೩. ಅಸಿತೇಂದೀವರ ಲೋಲಲೋಚನೆಯನಂದಂತಾ ಸಭಾಮಧ್ಯದೊಳ್
ಪಸುವಂ ಮೋದುವ[4]ವೋಲ್[5] ಮೋದಿಯುಮುದಂ ಕಂಡಂತೆ
ಪಲ್ಗರ್ಚಿ ಸೈ

೧. ಯೊಳ್ ೨-೩. ಡೆದು ಕೋರ್ಪ‍ಳ ೪. ದೌತಲೆಕಾಣ್ಬನ.
೫. ವೊಲೆಯ್ದು ೬. ವರೆಗಂ.



ರಿಸಿದೆಂ ನಿನ್ನಯೆ ನನ್ನಿಗಿನ್ನೆವರವಾ ದುಶ್ಶಾಸನೋರಃ ಸ್ಥಲೋ[1]
ಷ್ಣ ಸೃತಾ[1] ಸೃಗ್ಜಲಪಾನಮಂ ಬಯಸಿ ಬಾಯ್ ತೇರೈಸೆ
ಸೈತಿರ್ಪೆನೇ[2] ೩೦೫
(ಪಂಪನ ವಿಕ್ರಮಾರ್ಜುನ ವಿಜಯ ೭--೫೮)

(ನ ಕಾರದ ಣ ತ್ವಕ್ಕೆ)

೪. ಕಣ್ಣಾರೆ ನೋಡಿ ಮಾವಿನ
ತಣ್ಣೆಲೆಲೊಳ್ ನಲಿವ ಸಿದ್ಧಚಾರಣಗಣಮಂ
ಪಣ್ಣನೆ ಬಂದೆಳಗಾಯರೆ
ಪಣ್ಣನೆ ಪಱಿಪಱಿದು ತಿಂಬ ಬಲಿಮುಖಕುಲಮಂ ೩೦೬

ಸೂತ್ರಂ ೩೮

ಪೊಯೆ[3] ಬಯೆ ಮತ್ತಾರಯೆ ಗೆಯೆ
ಸಯೆಯೆಂದು[3] ವಿಕಲ್ಪದಿಂ ಯ ಸಂಯೋಗದೊಳಾ
ಶ್ರಯಿಸಿರ್ಕ್ಕುಂ ಗುರುಲಘುಗತಿ[4]
ನಿಯಮ[5] ಮದೇದೋದ್ದ್ವಯಕ್ಕಮಕ್ಕುಂ ಪ್ರಾಯಂ. ೩೦೭

ಪ್ರಯೋಗಂ

೧. ನಡೆ ಕೋಲ್ವರ[6] ಮುಂದಂಬುರ
ದೆಡೆಯಂ ಪು[7]ಣ್ಣಾಗ್ತರ್ ಕಾಳವಟ್ಟದ ಕೊಪ್ಪಂ[8]

೧. ಸ್ಥಲೋ।ಚ್ಛೃ ಸಿತಾ. ೨. ಸೈರಪ್ಪೆನೇ. ೩-೩. ಯರ್ ಬಯರ್
ಮತ್ತಾರಯರ್ ಗೆಯರ್।ಸಯ್ಯೆಂದು ೪. ಕತಿ. ೫. ನಿಯತ ೬. ಕೊಲ್ವ
೭. ಪೂ ೮. ಕೊಳ್ಪಂ

ಪಿಡಿದು ನೆಜಲ್ದರ್ಕಸುತಂ
ಗಿಡಿಗಂ ಪೊಯೆ ನೊಂದ ಭುಜಗನಿರ್ವಂತಿರ್ದಂ ೩೦೮

೨. ಮೆಯ್ಯ ಮಸಿ ಕೊರಲ ಬಕ್ಕಳೆ[1]
ಪೊಯ್ಯ ಪುಗಿ[2]ಲ್ಗರಿವ ಕೆಯ್ಯ ಕಂಕರಿಕೆ ಕಥಂ
ರಯ್ಯಮೆನೆ ಪಾಡು[3] ತಿರ್ದಳ
ನೊಯ್ಯನೆ ಕಡೆಗಣ್ಣೊಳಡರೆ ಚಪ್ಪರಿಸುತ್ತುಂ ೩೦೯

ದ್ರುತವಿಲಂಬಿತವೃತ್ತಂ

೩. ಪಿಡಿದು ಮಚ್ಚದೆ ನೋವದೆ ಪೆಂಡಿರಂ
ಜಡಿ[4]ಯೆಯುಂ ಬಯೆಯುಂ[4] ಬಲಗರ್ವದಿಂ
ವಿಡುಕಲಣ್ಮದೆ ನೋಡಿದ ಸಾಸಿಗಂ[5]
ನುಡಿಯದಿರ್ಕುಮೆ ಬೀರಮನಾರೊಳಂ ೩೧೦

೪. ಸುಯ್ಯ[6] ನಿಡುಪುಡುಗ[6] ದಿರೆಯುಂ
ಮೆಯ್ಯರೆ[7] ಮಟ್ಗದೆಯುವಿಂತು ಸಂದಂದಿನಿಬರ್[7]
ಬಯ್ಯಲೆ ಪೊಯ್ಯಲೆ ಕುರುಳಂ[8]
ಕೊಯ್ಯಲೆ ಪೋಯ್ತಿಂತು[9] ವಿನಯವತಿಗಂ ಪತಿಗಂ ೩೧೧

---

೧. ಬಕ್ಕಂ ೨. ಘೆರಿ ೩. ತಿರ್ಪ ೪-೪ ಯಲುಂ ಬಯಲುಂ, ೫. ಸಾಸಿರಂ ೬-೬. ನಿಡಪಡುಗ; ವಿಡುಪುಡುಗ; ೭-೭. ಯ್ಯುರಿ ಮಟ್ಗದೆಯುವಿಂತು ಸಂದದಿನಿಬರ್ ೮. ತಲೆಯಂ ೯. ಬೆಳಗಾಯ್ತು



೫. ಆರಯೆ ಜಡನಾದೊಡಮಧಿ
ಕಾರಿಯ ವಹಾಡಿದುದೆ ಪವಣವಂತಿಂತೆನವೇ
ಡೂರೂರೊಳುಬುಗನಾದೊಡ
ಮೂ[1]ರಡಿ ಪವಣೆಂಬುದಲ್ತೆ ನಾಣ್ನುಡಿ ಜಗದೊಳ್ ೩೧೨

೬. ಆರಯ್ಯೆ ಸರ್ವಭೂತಾ
ಧಾರಂ ಮಟಿ[2]ಯುಂ ನೃಪೇಂದ್ರನುಂ ಪುಟಿ[2]ಗಾಲಂ
ಬಾರದೊಡಂ ನಿರ್ವಹಿಸುವ
ರಾರುಂ ನೃಪನಿಲ್ಲದಂದು ನಿರ್ವಹಿಸುವರೇ ೩೧೩

ಸ್ವಾಗತವೃತ್ತಂ.

೭. ಏಳದಂಗೆಯಲಿವೀಗಡೆ ನನ್ನೊ
ಳ್ಪಾಳನೊಳ್ಗುದುರೆಯಂ ರಥಕಟ್ಟಾ[2]
ವ್ಯಾಳದಂತಿಕುಲಮಂ ಸಮಕಟ್ಟಂ
ಕಾಳೆಗಕ್ಕೆ ತಡೆದಪುದ[3] ಯುಕ್ತಂ ೩೧೪

೮. ನಿಮ್ಮಿಂ ಪಿಂಬಡಿನೊಳದೇ
ಸಮ್ಮದಮೆಮಗಂ ಧರಿತ್ರಿಗಂ ರಾಜ್ಯದ ಮೋ
ಹಮ್ಮಜಿ[1]ದುಮೊಂದದಿಮ್ಮೊಳ್
ಕೆಮ್ಮನೆ ನೀವಿನಿತುಮಾಗ್ರಹಂಗೆಯ್ಯದಿರಿಂ ೩೧೫

---

೧. ಮಾಜಡಿ. ೨. ಪತ್ತಿ. ೩. ದಿರ್ಪುದ.

೯. ಆಯತಿ ನಿರ್ವಿರ್ವಂತು ಗುಣಾ
ವ್ಣಾಯಮನೊಳಕೊಂಡು ಬಟ್ಟೆ[1]ಡದು ಬಾಜಿ[3]ನಿಕುಂ
ನ್ಯಾಯಮನೊಕ್ಕೆಳೆ ಪಟಿವಿನ
ಮಾಯಂ ಸಯೆ[2] ಬಟ್ಟುದೊಂದು ಬಾಟಿಂ ಬಾಟೀ ೩೧೬

೧೦. ಕಾಯದೆ ಚಲಮಂ ಪಲರುಂ
[3]ಚೀಯೆನೆ ಪತಿ ಸಾಯೆ ಸಯ್ಯ[4]ಲಂಜಿದ ನಾಯಂ
ನಾಯೆಂಬೆ[5] ನಾಳ್ದನಂ ಕಾ
ದಾಯತಿ[5] ನಿಲೆ ಸತ್ತ ನಾಯನಾಂ ನಾಯೆಂಬೆಂ ೩೧೭

( ಏ ಕಾರಕ್ಕೆ )

**ಮತ್ತೇಭವಿಕ್ರೀಡಿತಂ :**

೧೧. ಕುಡಿದಂಭೋಧಿಗಳೀಟಿವಂ ತವಿಪುದೇ ಗೋತ್ರಾದ್ರಿ[6]
ಸಂಘಾತವಂ
ಪಿಡಿದೇಂ ಕೀಟ್ವುದೆ ದಿಗ್ಗಜೇಂದ್ರಚಯವಂ ಮಾರ್ಪೊಯ್ವು[7]ದೇ
ಕಟ್ಟೆ ನಿ

೧. ಬಾಟ್ಟುಪಡು.  ೨. ಸಯ್ಯೆ.  ೩. ಚೀ.  ೪. ಸಾಯ.
೫-೫ ನಾಳ್ವನಂ ಕೊಂ|ದಾ; ನಾಳ್ವನಂ ಕೊಂ|ಡಾ.  ೬. ಗೋತ್ರಾದಿ
೭. ಮಾಪರ್ಗ.



ವ್ಮೃಡಿಗೊಪ್ಪಿಪ್ಪುದೇ ಲೋಕಪಾಲಕರನಾ ಬ್ರಹ್ಮಾಂಡಮಂ
ಚಂಚುವಿಂ
ದೊಡೆದೀಡಾಡುವುದೇ ವಿಹಂಗಮವಿದೆಂದೇಕಬ್ಬ
ನೀಮೇಳಿಪಿರ್ ೩೧೮

( ಓ ಕಾರಕ್ಕೆ )

**ಉತ್ಪಲಮಾಲೆ.**

೧೨. ತಂದೆಯ ನನ್ನಿಗಿತ್ತನನುಜಂಗೆಳೆಯಂ ರಘುವಂಶನೆಂದು ಜೀ
ಯೆಂದಪುದೀ ಜಗಜ್ಜನವಿದಂ ಸಿರಿ[1]ಗೆಂಬುದೊ
ಲೋಭಮೆಂಬುದೋ
ಪಂದೆತನಕ್ಕೆ ಮೊತ್ತಮೊದಲೆಂಬುದೊ ಮತ್ತಿನ
ನೆಂಬೊಡೂ[2]ನನೆಂ
ಗುಂ ದೊರೆವೆತ್ತನೆಂಗುಮೊ ಕುಲೋದ್ಗತನೆಂಗುಮೊ
ತಕ್ಕನೆಂಗುಮೋ ೩೧೯

(ಪ್ರಾಯೋಗ್ರಹಣಕ್ಕೆ )

೧೩. ಎಲೆವಳ್ಳಿಯ ತಳ್ಪಿಂದೇ
ಟಿಲೆವಾಟಿಯ ಪರೆಪಿನಿಂದಶೋಕೆಯ ಪೊದಟಿಂ
ಮಲೆವಾಯ್ವ ಲತೆಯ ಪುದುವಿಂ
ತೊಲಗದು ಬನದೊಳಗೆ ಬಳಿದ[3] ಕಟ್ಟಲೆ ಪಗಲುಂ ೩೨೦

೧. ಸಿರ  ೨. ನೆಂಬುದೂನ.  ೩. ಬಳಿವ ಪೊಳೆವ.

೧೪. ಓಲೆಯನೋಲೆಯೊಳಿಕ್ಕಿದ
ನಾಲೀಢಮನಿಟ್ಟು ಬೇಱ[3] ನುಡಿ[1] ದಟ್ಟಿದನೇಂ
ಚೋಳನೆ ಕೇರಳಧಾತ್ರೀ
ಪಾಲಂ ನುಡಿದಂತೆ ಸಾಳೆ ನಿಲ್ಕಾಹವದೊಳ್. ೩೨೧

---

೧. ನಡು.

(ಇದು ಶಬ್ದಸ್ಮೃತಿಯೊಳ್ ಸಮಾಸ ಪ್ರಕರಣಂ ಸಮಾಪ್ತಂ.)

---

# ೫. ತದ್ಧಿತ ಪ್ರಕರಣಂ

### ಸೂತ್ರಂ ೬೯.

ಇವು ಪಣ್ಯಮಿವರ್ಗೆ ಮೇಣಿಂ
ತಿವು ಶಿಲ್ಪಂ ಮೇಣ್ ನಿಯೋಗಮಿವನಱಿವಂ ಮೇ
ಣಿವನಾಚರಿಸುವನೆಂದಿಂ
ತಿವಱೊಳಿಗಪ್ರತ್ಯಯಂ ಯಥೋಕ್ತಿಯನಕ್ಕುಂ ೩೨೨

ಪ್ರಯೋಗಂ.

('ಇಗ' ಪ್ರತ್ಯಯಕ್ಕೆ)

೧. ಗಂದಿಗನೆರವಣಿ[1]ಗಂ ಸರ
ವಂದಿಗನಾ ಪಟ್ಟಸಾಲಿಗಂ ಬಾಣಸಿಗಂ
ಮಾಂದರಿಗಂ[2] ಜೋಯಿಸಿಗಂ
ಸಂದಱಕೆಯ ಕಬ್ಬಿಗಂ ಸಮಂಜಸನೊಳನೇ ೩೨೩

### ಸೂತ್ರಂ ೭೦

ಇದಱೊಳಿವಂ ವ್ಯಾಪೃತ[3] ನೆಸೆ
ತದಗ್ರದೊಳ್ ಕಾಱಶಬ್ದಮಕ್ಕುಂ ಕೆಯ್ಕೊಂ

---

೧. ಸೇರ. ೨. ಮುಂದುರಿಗಂ ಮಾಂದುರಿಗಂ. ೩. ವ್ಯಾಪೃತಂ.

ಡಿದನೀತಂ ನಡೆಯಿಪನೆನೆ
ತೊದಳೇಂ ವಳ[1]ಮೆಂದು ವಳ್ಳ[2]ಮೆಂದಿವು ನೆಗಳ್ಗುಂ ೩೨೪

ಪ್ರಯೋಗಂ. ('ಕಾಱ' ಪ್ರತ್ಯಯಕ್ಕೆ)

೧. ನಗೆವಡಿಕಾಱಂ ನೀಱಂ
ಬಗೆಕಾಱಂ ಪಾಟಕಾಱನೊಳ್ನುಡಿ ಕಾಱಂ[3]
ಪಗೆಕಾರನಾಗಿಯುಂ ಕೆಯ್
ವೀಗೆ ತಕ್ಕಂ ಕೆಯ್ದುಕಾಱನೆನಿಸಲ್ಕಾಱಂ ೩೨೫

('ವಳ-ವಳ್ಳ' ಪ್ರತ್ಯಯಕ್ಕೆ)

೨. [4]ಅಡಪವಳಂ ಪಡೆವಳ್ಳಂ
ಮಡಿವಳ್ಳಂ[4] ಸೆಜ್ಜೆವಳ್ಳನಜ್ಜಂ ಬೆಜ್ಜಂ
ಅಡು[5]ವಳನೆಂದಿಂತಿವರಂ
ಕಡಂಗಿ ಬಿಡೆ ಜಡಿಯದಿರ್ಕೆ ನಯಮುಱಿವರಸಂ ೩೨೬

## ಸೂತ್ರಂ ೭೧

ಇದನೀತಂ ಮಾಣ್ಬನೆನಿ
ಪ್ಪುದಱಿಂದೊಳ್ ಗಾಱಪ್ರಯೋಗಮಕ್ಕುಮಪಭ್ರಂ

---

೧. ಬಿಳ ೨. ಬಳ್ಳ ೩. ನೊಳ್ನಗೆಗಾಱಿಂ. ೪-೪. ಮಡಿವಳ್ಳ ಮಡಪವಳ್ಳಂ।ಪಡೆವಳ್ಳಂ. ೫. ಅಡುಬಳ, ಅಡೆಬಳ ಅಡಬಳ.



ಶದೊಳಮದೆ ವರ್ತಿಕುಂ ಮ
ತ್ತದರ್ಕೆ ಕರ್ಮಾರ್ದಿಯಾದೊಡಾದಿಗೆ ಲೋಪಂ ೩೨೭

ಪ್ರಯೋಗ

('ಗಾಱ' ಪ್ರತ್ಯಯಕ್ಕೆ)

೧. ಅಣಿಯರ ಮೆಸೆದೊಪ್ಪಿರ್ಪುವು
ಮಣಿಗಾಱರ ಕಂಚಗಾಱರೊಟಿಗಾಱರ ತಿಂ
ತಿಣಿಯೆನಿಪ ಮಾಲೆಗಾಱರ
ಗಣನಾತೀತಂಗಳಾಪಣಂಗಳ್ ಪೊಟಲೊಳ್ ೩೨೮

('ಗಾಱ' ಪ್ರತ್ಯಯದ ಆದಿವರ್ಣಲೋಪಕ್ಕೆ)

೨. ಅಱಿದು ನರನೊವಜರೆನ್ನಂ[1]
ಕುಱಿಗೊಱಿದಱಿದನದಱನೊಡ್ಡಿಸಿದಂ ಕ
ಮ್ಮಱನಂಬು ಕಮ್ಮಱಂಗೆಂ
ದಱಿಯದೆ ನುಡಿವಂತು ನಾಡವರ್ ಗಾವಿಲರೇ ೩೨೯

## ಸೂತ್ರಂ ೭೨.

ಈ ಪೇಳ್ದನಿತುಂ ಶಬ್ದಕ
ಳಾಪಂ ಸ್ತ್ರೀವಿಷಯಮಾದೊಡಿತಿ ಪರಮಕ್ಕುಂ
ರೂಪಾನ್ಯತ್ವದೊಳಾದಿಗೆ
ಲೋಪಂ ತತ್ ಪ್ರತ್ಯಯಕ್ಕೆ ಸಂಭವಿಸಿರ್ಕುಂ ೩೩೦

---

೧. ನೋದಜನ್ನಂ. ೧. ಮಾದೊಡಂ.

ಪ್ರಯೋಗಂ. ('ಇತಿ' ಪ್ರತ್ಯಯಕ್ಕಂ, ಅದಱೊಳ್ ಆದಿವರ್ಣಲೋಪಕ್ಕಂ)

೧. ಮಡಿಯಂ ಮಡಿವಳ್ತಿಯವೋಲ್
ಬಿಡದವ್ಯತಾನ್ನಮನೋಜಲ್ದು ಬಾಣಸಿಗಿತಿವೋಲ್
ಕುಡು[1] ತಿರ್ದಳ್ ಪೂಮಾಲೆಯ
ನೆಡೆಯಡುಗದೆ ಮಾಲೆಗಾರ್ತಿವೋಲ್ ಮತ್ತೊರ್ವಳ್. ೩೩೧

## ಸೂತ್ರಂ ೭೩

ಇಂತಿದು ವಿಭಾಷೆಯಿಂ ವ
ರ್ಣಾಂತರದೊಳಮಕ್ಕುಮುಱಿದ ಗುಣವಚನಮು[2]ಕಾ
ರಾಂತಮುಳಂತಂ[3] ಸ್ತ್ರೈಣದೊ
ಳಂತವಱಿಂ ಪೆಱವು ಪುಂಸ್ತ್ವದೊಳ್ ಸಮ[4]ರೂಪಂ ೩೩೨

ಪ್ರಯೋಗಂ

೧. ಒಕ್ಕಲಿತಿ ಜೋಡೆಯಾದಂ
ತಕ್ಕುವವಳ್[5] ಸಿತಗೆ ಪತಿಗೆ ವಿಗೆ ಕಾಯ್ವಳ್ ನೋ
ಟಕ್ಕೆ ಕಡುಸೊಂಪಿ[6] ಸಾಣಿಲಿ
ಬಕ್ಕಂ ಬಯಲೊಳವುದಾರುಮಂ ಬಂ[7]ಚಿಸುವಳ್ ೩೩೩

## ಸೂತ್ರಂ ೭೪.

ಅಲ್ಲಿಯೆ ಪುಟ್ಟದನಿಂತಿವ
ನಲ್ಲಿಯೆ ತಾಂ ಬಳೆದನೆಂದು ಪೇೞ್ವರ್ಥದೊಳಂ

---

೧. ತಿರ್ದಳ್ ೨. ವಚನಮು. ೩. ಮದಂತಂ ೪. ಸ್ತ್ರೀ ೫. ದೆವಳ್.
೬. ಸಾದು. ೭. ವಂಚಿ: ಭಂಚಿ.



ತೆಲ್ಲಮಿಚ ಪ್ರತ್ಯಯಮಿಂ
ತಲ್ಲಿ ಯಥಾಲಕ್ಷ್ಯಮಾದಿಗಕ್ಕುಂ ಹ್ರಸ್ವಂ ೩೩೪

ಪ್ರಯೋಗಂ ('ಇಚ' ಪ್ರತ್ಯಯಕ್ಕೆ)

೧. ಪೊಟಲಿಂದ್ರಪುರಂ ಕಾಲೂರ್
ಪೊಟಲಿಂದ್ರರ್ ಪೊಟಲ ಮಾನ[1]ಸರ್ ಕಾಲುರಿಚರ್
ಪೊಟಲಿಚರೆನೆ ಸೊಗಯಿಸುವುದು
ಪೊಟಲಿಂ ಕಾಲೂರ್ಗಳಿಂದಮಂತಾ ವಿಷಯಂ ೩೩೫

## ಸೂತ್ರಂ ೭೫

ಅಲ್ಲಿ ಇದುಂಟೆಂಬರ್ಥದೊ
ಳಿಲ್ಲಿಯುಮುಳ್ಳೊಡೆಯ ವಂತ ಶಬ್ದಮವಕ್ಕುಂ[2]
ಎಲ್ಲಂದದೊಳಂ ಪೋಲಿಸು
ವಲ್ಲಿ ಗುಣಾಧಿಕರೊ[3]ಳಂತೆ ವೋಲ್[4] ತಾನಕ್ಕುಂ ೩೩೬

ಪ್ರಯೋಗಂ. ('ಒಡೆಯ'-ಉಳ್ಳ-ವಂತ' ಪ್ರತ್ಯಯಗಳ್ಗೆ)

೧. ಸಿರಿಯೊಡೆಯಂ ಸಿರಿಯುಳ್ಳಂ
ಸರೂಪಿ[5] ಗುಣವಂತನಧಿಕದಾನಿ ಮಹೇಚ್ಛಂ[6]
ನರರೊಳವನೆನಿಸಿ ಬಾೞ್ವುದು[7]
ಪುರಾತನೋದಾತ್ತಪುಣ್ಯಪರಿಪಾಕಫಲಂ ೩೩೭

---

೧. ವರ್. ೨. ಶಬ್ದಮುಮಕ್ಕುಂ ೩. ಗುಣಾಧಿಕದೊ. ೪. ಪೋಲೆ
ನಲಕ್ಕುಂ. ೫. ಸುರೂಪಿ. ೬. ಸುಹಾಂತಂ. ೭. ಬಾೞ್ವುದೆ.

(ಅಪರಾರ್ಧಕ್ಕೆ–'ಅಂತೆ'–ಎಂಬುದಕ್ಕೆ)

೨: ಸುರಪತಿಯಂತೆ ವಿಸ್ಫುರಿತನೇತ್ರಸಹಸ್ರವಿರಾಜಿತಂ ನರೇ
ಶ್ವರಭವನಾಗ್ರದಂತೆ ದೃಢವೇತ್ರ[1]ಲತಾಶತದುಷ್ಪ್ರವೇಶಮಂ[2]
ಬರತಳದಂತೆ ಋಕ್ಷಮೃಗಲುಬ್ಧಕಸಂಗತ[3]
ಮಂಬುರಾಶಿಯಂ
[4]ತಿರೆ ತತವಿದ್ರುಮ[4]ದ್ಯುತಿ ನಿರಂತರಮೊಪ್ಪುಗುಮಾ
ವನಾಂತರಂ ೩೩೮

('ವೋಲ್' ಎಂಬುದಕ್ಕೆ)

೩. ಕರಿವೋಲ್ ಭದ್ರಗುಣಂ ಕೇ
ಸರಿವೋಲ್ ನಿರ್ವ್ಯಾಜಶೌರ್ಯನಂಭೋನಿಧಿವೋಲ್
ಶರಣಾಗತರಕ್ಷಣಪಟು
ಗಿರಿವೋಲ್ ನಿಷ್ಕಂಪಚಿತ್ತನಾ ನೃಪತುಂಗಂ[5] ೩೩೯

ಸೂತ್ರಂ. ೭೬

ಅವಱೊಳ್ ವೋಲ್ಗಕ್ಕುಂ ಹ್ರ
ಸ್ವವಿಧಾನಂ ಪಾಕ್ಷಿಕಂ ಮಕಾರಾಗಮದಿಂ
ವ್ಯವಧಾನಮುವರ್ಣಕ್ಕ
ಕ್ಕುವಲ್ಲಿ ಬಶ್ರುತಿ ವಕಾರದೊಳ್ ನೆಲೆಗೊಳ್ಗುಂ ೩೪೦

---

೧. ಪರಿವೇತ್ರ ೨. ಸಕಶತಪ್ರವೇಶ ಶತದುಷ್ಪ್ರದೇಶ. ೩. ಸಂಕುಲ. ೪–೪. ಕುರುತರ ವಿದ್ರುಮ. ೫. ನೃಪಪುತ್ರಂ



ಪ್ರಯೋಗಂ

(ಪೂರ್ವಾರ್ಧಕ್ಕೆ 'ವೊಲ್' ಎಂಬ ರೂಪಕ್ಕೆ)

ಮಣಿವಿಭೂಷಣವೃತ್ತಂ.

೧. ಶ್ರೀಯ ಜವ್ವನ (ದ) ರೂಪಿನ ಗಾಡಿಯ ಪೆಂಪಿನೊಂ
ದಾಯು ಕಾನೆ ನಡೆತರ್ಪವೊಲೊಪ್ಪಿರೆ ಬಂದಭಿ
ಪ್ರಾಯಸಿದ್ಧಿಯನೆ[1] ಚಿಂತಿಸುತುಂ ಮನದೊಳ್ ಜಯ
ಶ್ರೀಯ ದೂದವಿವೊಲಾ ಸತಿ ಕಂಡು ಶಿಖಂಡಿಯಂ ೩೪೧

(ಅಪರಾರ್ಧಕ್ಕೆ : 'ವೊಲ್' ಬಿಂದುವೆರಸು 'ಬೊಲ್' ಎಂದಾದುದಕ್ಕೆ)

ಮತ್ತೇಭ ವಿಕ್ರೀಡಿತಂ

೨. ನಿಗಳಂಬೊಲ್ ತೊಡರ್ದಿರ್ದ ಮೋಹನಿಗಳಂ
ನಿವ್ರ್ಯಾಕುಳಂ ಪಿಂಗೆ ಮ
ತ್ತಗಜೇಂದ್ರಂಬೊಲಲರ್ಗಳಂ ವನ[2]ಮನಂದಾನಂದದಿಂ ಪೊಕ್ಕನಾ
ವಗಮಾದಳ್ಕಱಿಳುರ್ಕೆಯಿಂ ಮಕುಟಬದ್ಧರ್ ನೂರ್ವರಂತಲ್ಲಿ ದೀ
ಕ್ಷೆಗೊಳಲ್ ತನ್ನೊಡವೋಗೆ ನಿಶ್ಚಿತಮನಂ ಶ್ರೀಚಂದ್ರ
ಭೂವಲ್ಲಭಂ ೩೪೨

ಸೂತ್ರಂ ೭೭.

ತನಮಿಕೆಯುಮೆಂಬಿವುಂ ಚೇ
ತನಭಾವದೊಳಕ್ಕುಮುಱಿದ ಭಾವಾರ್ಥದೊಳಂ

---

೧. ಬ್ರಾಯಸಿದ್ಧಿ. ೨. ಶರವು.

ತನಿತಱಿೊಳಂ ಪು ಕೆಯೆಂಬಿವು
ಜನಿಯಿಕುಮಂತಲ್ಲಿ ಕ ದ್ವಿರುಕ್ತಿ ವಿಕಲ್ಪಂ ೩೪೩

ಪ್ರಯೋಗಂ. ('ತನ'-'ಇಕೆ' ಪ್ರತ್ಯಯಗಳ್ಗೆ)

೧. ಕಡುಗಲಿತನಮಂ ಚಾಗದ
ಪೊಡರ್ಪುಮೊಳ್ನುಡಿ[1]ಯೊಳಾದ ಮಾನಸಿಕೆಯುಮು
ರ್ಕುಡುಗದ ಶೌಚಮುಮಾಯದ
ಪಡೆವಾತುಂ ಪೆರ್ಮೆವಡೆದುವವನಿಂ[2]ದಿಳೆಯೊಳ್ ೩೪೪

(ಅಪರಾರ್ಥಕ್ಕೆ 'ಪು' ಪ್ರತ್ಯಯಕ್ಕೆ)

೨. ವಾರಿಧಿಯದೊಂದು[3] ಗುಣ್ಪುಂ
ಧಾರಿಣಿಯ ಪೊಗಟ್ತ್ತಿವೆತ್ತ ಪೆಂಪಿನ ತಿಣ್ಪುಂ
ಮೇರುವಿನ ಬಿಣ್ಪುಮಾ ನೃಪ
ಧೀರನೊಳೊಂದಾಗಿ ನಿಂದುವೆನ್ನದರೊಳರೇ ೩೪೫

('ಕೆ' ಪ್ರತ್ಯಯಕ್ಕೆ)

೩. ನವಿಕಾರಿಗೆ ದವಿಕಾರಿಗೆ
ಸಮಸ್ತಧಾತ್ರೀವಿಭಾಗದೊಳ್ ಭಾವಿಸೆ ವಿ
ಕ್ರಮದ ನಿವಿರ್ಕೆಗಮಾಯತಿ
ಯಮರ್ಕೆಗಂ ಪೇೞ ಪೊಲ್ಕೆ[4]ಗಾವಂ ಬರ್ಪಂ ೩೪೬

---

೧. ಮೊರ್ನುಡಿ ೨. ಪಡಗುವುವನಿಂ ೩. ವಾರಿಧಿಗಿದೊಂದು ವಾರಿನಿಧಿಯೊಂದು ೪. ಪೇೞ್ ಪೊಣರ್ಕೆ.



(ಕ ಕಾರ ದ್ವಿತ್ವಕ್ಕೆ)

೪. ಬೇಸಱಿದಾಸಱಿದೆ ವನಾ
ವಾಸಂಗಳೊಳುನ್ನತಿಕ್ಕೆ ನಿಲೆ[1] ನವೆದ[2]ದವರೊಳ್
ನೇ[3]ಸನ್ನಿಕೆಯಿಂ ಕುರುಪತಿ
ಬೀಸರಮಂ ನುಡಿಯದೊಳ್ಳಿತಂ ನುಡಿದಪನೇ ೩೪೭

ಸೂತ್ರಂ ೭೮

ಒಂದೆರಡು ಮೂಱುನಾಲ್ಕ
ಯ್ದೆಂದನಿತರ್ಕಂ[4] ಬಹುತ್ವವಾಚಿಯೊಳಮು[5]ರ್ದಂ
ತೊಂದಿ[6]ನೆಗಟ್ಟುಂ ವಿಕಲ್ಪಂ
ಸಂದಿಸಿ ನೆಲಸಿರೆ ಮೆಯೆಂಬುದಕ್ಕುಂ ಸೂಟಿಯೊಳ್. ೩೪೮

ಪ್ರಯೋಗಂ. ('ಮೆ' ಪ್ರತ್ಯಯಕ್ಕೆ)

ಮತ್ತೇಭವಿಕ್ರೀಡಿತಂ.

೧. ಶಯುದಂಷ್ಟ್ರಾವಿಷದಂಶವೊಂದೆ ಜತುಗೇಹೋದ್ದೀಪನಂ ತಾನದೊಂ
ದೆ ಯಥೇಷ್ಟ[6]ಪ್ರಕೃತಂ ದುರೋದರಜಯಂ ಮತ್ತೊಂದೆ ಕಷ್ಟಪ್ರತಿ
ಕ್ರಿಯೆ[7]ಯಪ್ಪಾ ವಿಷದೂಷಿತಾಶನವುದಂತೇನೊಂದೆ ಪೇೞ್ವಾಗಳೊ
ರ್ಮೆಯೊ ಮೇಣಿ[7]ರ್ಮೆಯೊ ಮೂರ್ಮೆಯೋ ಕುರುಕುಳಪ್ರಾರಬ್ಧದುರ್ವೃತ್ತಕಂ. ೩೪೯

---

೧. ಗಿಡೆ. ೨. ಸವೆದ ೩. ನೀ. ೪. ತರ್ಕಾ ೫. ಮುರ್ದ| ತ್ತೊಂದಿ. ೬. ಯಥೇಷ್ಟಂ ೭. ಕ್ರಿಯುಮುಪ್ಪಾ. ೮. ಪೇೞು.

೨. ನೂರ್ವೆ ಪಶು ಕಱಿವುದಂ ತಾ
ನೊರ್ವೆಯೆ ಕಱಿವೆರ್ಮೆಯಲ್ಲದಱ ಯೆರ್ಮೆ[1]ಗಳೀ
ಯೆರ್ವೆಗಳೊಳಗಿಲ್ಲೆನಿಸಿ
ರ್ದೆರ್ಮೆಯ ಪಿಂಡುಗಳನೊಪ್ಪುಗುಂ ಕೆಲವೆಡೆಯೊಳ್ ೩೫೦

(ವಿಕಲ್ಪಕ್ಕೆ)

ಮತ್ತೇಭವಿಕ್ರೀಡಿತಂ.

೩. ತನಗಿಂಬಪ್ಪುದನಾಯ್ದು ನೋಡಿ ಪಲವುಂ ಬಿಲ್ವಿಲ್ಗಳೊಳ್
ಬಿಲ್ಲನೊಂ
ದನೆ ಕೊಂಡೇಱಿಸಿ ನೀವಿ ಜೇವೊಡೆದಡುರ್ತೊಂದಂಬಿ
ನಿಂ[2]ದೊಂದು ಸೂ
ಟ್ವನೆಯಂ[3] ಪಾವಿನ ಬೆನ್ನೊಳಾದುವನತಿಪ್ರಾರಂಭದಿಂದೇಱುಮಂ
ಜನಕಾಧೀಶತನೂಜೆಯಾಣ್ಮನಿಸುವಂತೆಚ್ಚಂ
ಮಹೇಂದ್ರಾಂತಕಂ ೩೫೧

## ಸೂತ್ರಂ ೭೯.

ಆಳಿಪ್ರತ್ಯಯಮಕ್ಕುಂ
ಶೀಲಾದ್ಯರ್ಥಂಗಳಂ ವಿವಕ್ಷಿಸೆ ಪೆಱತೊಂ
ದಾಳಾಪಮಂತದೇನೊ ಯ
ಥಾಲೋಕನಿರೂಪಿತೋಕ್ತಿಗಳ್ಗನುಸಾರಂ ೩೫೨

೧. ದುಱುದೆರ್ಮೆ ೨. ದೊಂದೆಸೂ|ಱನೆಯಂ. ೩. ಮಹೇಂದ್ರಾತ್ಯಕಂ.



ಪ್ರಯೋಗಂ. ('ಆಳಿ' ಪ್ರತ್ಯಯಕ್ಕೆ)

೧. ಮಾಱಾಳಿಯು ಮೋದಾಳಿಯು
ಮೇಱಾಳಿಯುಮಪ್ಪನಾಗಿ ಪಡೆ[1]ಪಾಳಯೆ ಕೇಳ್
ನೀಱಂ ಜೂದಾಳಿ ಕರಂ
ನೀಱಂ[2] ಮಾತಾಳಿ ಕರೆಯೆ[3] ಸಿಗ್ಗಾಳಿಯಿವಳ್[4] ೩೫೩.

## ಸೂತ್ರಂ ೮೦

ಅದುವಿದುವುದುವೆಂಬಿಂತೀ[5]
ವಿದಿತಾರ್ಥದ ಸರ್ವನಾಮಶಬ್ದಕ್ಕಕ್ಕುಂ
ತದುಪಾಧಿವಿಹಿತ[6] ಪರಿಮಾ
ಣ[6]ದೊಳನಿತಿನಿತೆನಿತೆನಿಪ್ಪ ರೂಪನಿಪಾತಂ ೩೫೪

ಪ್ರಯೋಗಂ.
ಮತ್ತೇಭವಿಕ್ರೀಡಿತಂ : ('ಅನಿತು-ಇನಿತು' ಗಳ್ಗೆ)

೧. ಅನಿತೊಂದಣ್ಮನಿತೊಂದು ದರ್ಪಮನಿತೊಂದೌದ್ಧತ್ಯಮುಂ
ಮುನ್ನ[7]ಮಾ
ದನೊಳಿನ್ನಪ್ಪ[7]ನೊಳುಂಟೆ ದಾನವರೊಳೆಂಬುದ್ವೃತ್ತನಂ
ನಾರಸಿಂ
ಹನ ರೂಪಿಂ ನಖದೊಳ್ ವಿದಾರಿಸಿ ಕುಸುಂಭಾರಕ್ತಮಂ
ಪಟ್ಟಗಾ
ಱನೆ ಪಾಸಂ ತವೆ[9] ತೋಡುವಂತೆ ಕರುಳಂ ನೀಂ ತೋಡಿದಯ್
ದೈತ್ಯನಾ ೩೫೫

೧. ಪಡ. ೨. ನೀಱ[3]ಗೆ. ೩. ಕಳೆಯೆ ೪. ಯುಪಂ. ೫. ತಿವು
೬-೬. ಪರಿಹಾ|ವ: ೭. ಮಾ|ರನೊಳಿಂತಪ್ಪ ೮. ದಾನವನೊ. ೯. ತನೆ

೨. ಇನಿತಟಲುವಿನಿತು ಮಱುಕಮು
ವಿನಿತು ಮನಃಕ್ಷತಮುಮಾವನಿಂದಾದುದವಂ
ಗಿನಿತಟಲನಿನಿತು ಮಱುಕಮ
ನಿನಿತು ಮನಃಕ್ಷತಮನಬ್ಬ[1] ಮಾಡದೆ ಮಾಣೆಂ. ೩೫೬

೩. ಜನನೀಜನಕಸಹೋದರ
ವನಿತಾಸುತಪೌತ್ರ ಮಿತ್ರ[2] ಸಂಬಂಧಮದೆಂ
ತೆನಿತೆನಿತು ಭವದೊಳಾಯ್ತಿ
ಲ್ಲೆನಿತೆನಿತಂ ನೆನೆವುದೆನಿತನವಧರಿಸುವುದೋ ೩೫೭
(ಪಂಪನ ಆದಿಪುರಾಣ ೯-೫೪)

(ಇವರ್ಕೆ ದ್ವಿತ್ವ ಪ್ರಯೋಗಮುಂ ಸೂತ್ರ ನಿರ್ದೇಶದೊಳ್
ಜ್ಞಾಪಕ ಸ್ಥಿತ[3]ಮಕ್ಕುಂ )

ಮಲ್ಲಿಕಾಮಾಲೆ

೪. ಕಾಯಲುಂ ಬಲಗರ್ವದಿಂ ನೆಲನೆಲ್ಲಮಂ ನೆಲಕೆಲ್ಲಮಾ
ತೀಯಲುಂ ತನಗಾ ಚತುರ್ಭುಜಮುಂ ಭುಜದ್ವಯಮಾದನಿ
ತ್ತಾಯದಾಯತಿ ಕೋಳೊಳೊಪ್ಪಿರೆ ಮಿಕ್ಕ ಪೆಂಪಿನ ಕೀರ್ತಿನಾ
ರಾಯಣಂ ದಯೆಗೆಯ್ಗೆ ಚಾಗ[4]ಚತುರ್ಭುಜಂ ಗರುಡಧ್ವಜಂ ೩೫೮

ವಂಶಸ್ಥವೃತ್ತಂ

೫. ಎನಿತ್ತೆನಿತ್ತಂಬುಜಪತ್ರನೇತ್ರೆಯಾ
ಘನಸ್ತನಂಗಳ್ ಬಳೆಗುಂ ಕಿರಾತೆಯಾ
ಅನಿತ್ತನಿತ್ತಂ ವನದೊಳ್ ವನೇಚರಂ
ತನತ್ತು[5] ಬಿಲ್ಲಾನದನಂತು[6] ಕೀಸುಗುಂ[7] ೩೫೯

೧. ನಚ್ಚಿ. ೨. ಮಿತ್ರ, ಪುತ್ರ ಪುತ್ರ, ಮಿತ್ರ. ೩. ಸಿದ್ಧ. ೪. ಭಾಗ
೫. ತನಿತ್ತು. ೬. ನಂತೆ. ನೆತ್ತೆ, ನೊತ್ತೆ. ೭. ಕೀಸುವಂ.



ಸೂತ್ರಂ ೬೧

ಮತ್ತಮವರ್ಕ್ಕುಂ ಸಮು
ಪಾತ್ತ ನ ಕಾರಂ ಪ್ರಕಾರಕಾಲಾರ್ಥಂ ಮೆಯ್-
ವೆತ್ತಿರೆ ತುದುವೆಂಬಿವು ವಿ
ದ್ಯೋ[1]ತ್ತಮರೀ ತೆಱದಿನಱಿಗೆ ಪೆಱವುಮನಿದ[2]ಱಿಕೊಳ್ ೩೬೦

(ಪ್ರಕಾರಾರ್ಥಕ್ಕೆ[3])

ಪ್ರಯೋಗಂ.

ಸ್ವಾಗತವೃತ್ತಂ.

ಅಂತು. ಕಾಡುಗುಮೆ ಲೋಕಮನಿಂದ್ರಂ
ಗಂತು ಮಾಡುಗುಮೆ ಬನ್ನಮನೋವೋ
ಅಂತು[4] ಸೂಡುಗುಮೆ ಕೇಸುರಿಯಂ ಪೇ
ಳಿಂತು ಕೂಡು[5]ಗುಮೆ ಬೀರಮದಾರ್ಗಂ[6] ೩೬೧

೨. ಇಂತಿಂತೆ ಪಲಬರುಂ ತತ್
ಸಂತತಿಯೊಳೆ ಕಳಿದು ಪೋಗೆ ಜನಿಯಿಸಿದಂ ದು
ಷ್ಯಂತಂ ದುಷ್ಯಂ[7]ತಂಗಮ
ನಂತಗುಣಂ ಭರತರಾಜನೆಂಬಂ[8]ತನಯಂ. ೩೬೨

೩. ಎಂತೆಡಱಿದಯೆಂತುರ್ಕಿದ[9]
ಯೆಂತೊದವಿದ ಯೆಂತು ಮುಗುಟ್ಟಿ[10]ಯೆಂತೊದಱಿದಯಾ
ಯ್ತೆಂತೆನಗಿದಿರ್ಚಿದಯ್ ಮುಗು
ಟ್ಟಿಂ ಕೊಡರದಿರೆನೆ ಸಿತಾಶ್ವನೆಂದಂ ಕರ್ಣಂ ೩೬೩

೧. ದ್ವಂ. ೨. ಮಿನ ೩. ಪ್ರಕಾರಕಾಲಾರ್ಥಕ್ಕೆ. ೪. ಪಂತು ೫. ಸೂಡು
೬. ಸಾಹಸಮಾರ್ಗಂ. ೭. ದೌಷ್ಯಂತ. ೮. ನಾದಂ. ೯. ದೆ. ೧೦. ಟ್ಟೆ

(ಕಾಲಾರ್ಥಕ್ಕೆ)

ಮಹಾಸ್ರಗ್ಧರೆ.

೪. ಮುನಿಸಿಂ ಮೇಲೆತ್ತಿ ಬರ್ಪಂದಿನ ವಿಪುಳಶಿಳಾಸ್ತಂಭಮಂ
ಕೀಱಿಕೀೞ್ವಂ
ದಿನ ಬೆಂಕೊಂಡಟ್ಟಿ ಕೊಲ್ವಂದಿನ ತಿರಿಪಿ ಕಪಿತ್ಥಾವನೀಜಾತದಿಂದಂ
ಬನದೊಳ್ ಮೆಯ್ವೆರ್ಚಿ ಪೊಯ್ವಂದಿನ[1] ನಿಜಭುಜವಿಕ್ರಾಂತ
ಮೇನಾದುದಿಂತೀ
ಜನಮೆಲ್ಲಂ ನೋಡೆ ಚೌವಟ್ಟದ ಬಿಸುವುಡಿಯೊಳ್ ಬಿೞ್ದು
ಸಾವಂತುಟಾಯ್ತೇ ೩೬೪

ಮಲ್ಲಿಕಾಮಾಲೆ.

೫. ಇಂದು ಪಿಂಗಿದುವೆಮ್ಮ ಪೀಡೆ[2]ಗಳಿಂದು ಸಾರ್ದುವು ಸಯ್ಪು ತಾ
ವಿಂದಮೋಘಫಲಂಗಳಾದುವು[3] ಯಜ್ಞದಾನಸಮಾಧಿಗಳ್
ಇಂದು ನಂಬಿನವಾಯುಮೆಮ್ಮ ನೆಗೞ್ತೆಯೊಳ್ಪನದಲ್ಲದೆ
ಮಿಂದುವಂಶಮುಮಿಂದು ನಿರ್ಮಳಮಾದುದಿಂದು
ಧರೋಪಮಾ. ೩೬೫

೬. ಎಂದಮರರನರೆಯಟ್ಟುವೆ
ನೆಂದಮರಾವತಿಯ ನೀೞ್ದುಕೊೞ್ವೆಂ ಶಕ್ರಂ
ಗೆಂದಭಿಭವಮಂ ಮಾಡುವೆ
ನೆಂದಲ್ಲಿ[4] ಪಲುಂಬಿ ಚಿಂತಿಕುಂ ದನುತನಯಂ. ೩೬೬

೧. ಪೋಯ್ದು. ೨. ಸೇಡೆ ೩. ವೇ ೪. ನೆಂದೆಂದು.



( ಅಲ್ಲಿ ಪೆಱವು ಗ್ರಹಣಕ್ಕೆ )

ಚಂಪಕಮಾಲೆ.

೭. ವಿರಹದೊಳಾದ ವೇದನೆಯನಾಱಿಸಲಾ ಮರನೊಳ್ಳಿತೆಂದು
ಮಾ-
ಮರದ ನೆೞಲ್ಗೆ ಪೋಪೆ ಗಡ ಕಾಮನ ಡಾಮರಮಲ್ಲಿ[1]
ಕೋಕಿಲೋ
ತ್ಕರರವ[2]ಮಲ್ಲಿ ಚಾವಳಿಪ ರಾಜಶುಕವ್ರಜಮಲ್ಲಿ ಕಾಯ್ದು ಪಲ್
ಮೊರೆವ ಮದಾಳಿ[3]ಯಲ್ಲಿ ಸಖಿ ಸಾರದಿರಾ ಮರನಂ
ವಸಂತದೊಳ್ ೩೬೭

ಸೂತ್ರಂ ೮೨

ಗಣನಾವಿಶೇಷಪರಿಪೂ
ರಣದೊಳಮನಿತಿನಿತೆನಿತ್ತು ಶಬ್ದಂಗಳ ಪೂ
ರಣದೊಳಮನೆಯ ಪ್ರತ್ಯಯ
ಮೊಂದರ್ದು ಸಮಂಕೊಂದಿ ತೋಱುಗುಂ
ತದ್ಧಿತದೊಳ್ ೩೬೮

ಪ್ರಯೋಗಂ :

೧. ಜಿನಮದನರೊಳಗೆ ಪದಿನಾ
ಱನೆಯಂ ತತ್ಸಕಲಚಕ್ರವರ್ತಿಗಳೊಳಗ
ಯ್ದನೆಯನೆನೆ ಪುಣ್ಯಪುಂಜಾ
ರ್ಜನಕ್ಕೆ ಶಾಂತೀ[4]ಶನಂತು ನೋಂತರುಮೊಳರೇ[5] ೩೬೯
(ಪೊನ್ನನ ಶಾಂತಿಪುರಾಣಂ ೧-೧೩)

೧. ದಲ್ಲಿ. ೨. ದುಲಿಪಲ್ಲಿ. ೩. ವಳಿಮಾಲೆ. ೪. ಶಾಂತೇಶ.
೫. ನೋಂತವರೊಳರೇ.

೨. ಇನಿತನೆಯ ಭವದೊಳಿಂತಾ
ಯ್ತಿನಿತನೆಯ ಭವಾಂತರಂಗಳೊಳ್ ಮತ್ತಂ ಮೇ
ಲಿನಿತು ಸುಖದುಃಖಫಲಮುಂ
ಜನಿಯಿಕುಮೆಂದಱಿವುದರಿದು ಸಂಸೃತಿಗತಿಯೊಳ್ ೩೭೦

## ಸೂತ್ರಂ ೮೩

ಇರೆ ತದ್ಧಿತಪ್ರಯೋಗಂ
ಪರದೊಳ್ ಚರಮಸ್ವರಕ್ಕೆ ಲೋಪಮದಕ್ಕುಂ
ನಿರವಿಸಿ ಮುನ್ನೆ ಸಮಾಸಾಂ
ತರದೊಳ್ ಪೇೞ್ದೊಂದು ಕಾರ್ಯಮುಂ
ಬಂದಿರ್ಕುಂ ೩೭೧

ಪ್ರಯೋಗಂ.
ಮಣಿವಿಭೂಷಣವೃತ್ತಂ:
೧. ತೊಟ್ಟು ತೀವಿ ಬಳೆಯಂ ನೀಡುದೊಳ್ಗೊಳೊಂದುವಂ
ತುಟ್ಟು ಪೆಣ್ಣುಡೆಯನಾಡಿಸಿ[1] ಬಾಬ್ದು ಶಿಖಂಡಿ ಮುಂ
ನೆಟ್ಟನರ್ಜುನನ ಸಾರಥಿಯೆಂಬುದನೀಗಳೀ
ಘಟ್ಟವಳ್ತು ನುಡಿದಳ್ ತಿಳಿವಂತೆಮಗೆಲ್ಲಮಂ. ೩೭೨

---

೧. ನಾಟಿಸಿ.



ರಥೋದ್ಧತವೃತ್ತಂ.
೨. ಒರ್ಮೆ ಪೋಗಿ ಮೃಗಯಾನಿಮಿತ್ತದಿಂ
ಧರ್ಮಮಂ ಮಱೆದು ನೋಡ[2] ಬೇಡಿದೊಂ
ಪೆರ್ಮೆಗೆಟ್ಟು ಜಮದಗ್ನಿಯಂ ನೃಪಂ
ದುರ್ಮದಂ ಸುರಭಿಯಂ ವಿಮೋಹದಿಂ ೩೭೩

---

೧. ನೋಡಿ.

(ಇದು ಶಬ್ದಸ್ಮೃತಿಯೋಳ್ ತದ್ಧಿತ ಪ್ರಕರಣಂ ಸಮಾಪ್ತಂ)

# ೬. ಆಖ್ಯಾತ ಪ್ರಕರಣಂ

**ಸೂತ್ರಂ ೮೪.**

ಭೂತವತಿ ವರ್ತಮಾನಂ
ಖ್ಯಾತಭವಿಷ್ಯಂತಿ ಸರ್ಗಸಾಧನಿಯೆಂಬಾ[1]
ಖ್ಯಾತ ವಿಭಕ್ತಿಗಳಕ್ಕುಮ
ತೀತಭವದ್ಭಾವಿಕಾಲವಿಧ್ಯಾದಿಗಳೊಳ್ ೩೭೪

ಪ್ರಯೋಗಂ.
ಚಂಪಕಮಾಲೆ.

೧. ತ್ರಿಭುವನ ರಾಜ್ಯ ಪಟ್ಟದೊಡವುಟ್ಟದನಾ ವಿಭು ಪುಟ್ಟಿ[2]ದಂತೆ ತಾಂ[2]
ರಭಸದೆ ಸಿಂಹವಿಷ್ಟರಮನೇಱಿದನೆತ್ತಿದೆ ತಾಮೆ ಮುಂದೆ ಬಂ
ದಭಿಮತಮುಪ್ಪ ಬೆಳ್ಗೊಡೆಗಳುಂ ನೆಗೆದೊಪ್ಪಿದುವಿಂತೆ[3] ದಲ್
ಜಗತ್
ಪ್ರಭುತೆ ಜಗತ್ರಯಂಗಳೊಳಗಗ್ಗಳವಾಗಿದು ದೈತ್ಯರಾಜನಾ ೩೭೫

(ವರ್ತಮಾನಕ್ಕೆ)

೨. ಎಸಗಿದುದೀಗಳೀಗಳನಿಸೊಯ್ಯನೆ ತೆಂಕಣಗಾಳಿ ಕೋರಕ
ಪ್ರಸರದಿನೀ[4] ಗಳೀಗಳೆಸೆದಪ್ಪುದು[5] ಚೂತಮಹೀಜಮೆಯ್ದೆ ರಾ

---

೧. ಯೆಂಬಾ. ೨–೩. ದಂತಿರಾ ೪. ವಿಂತು ೫. ದೊಳೀ.
೬. ದಿರ್ದುದು.



ಗಿಸಿ ದೆಸೆಗೀಗಳೀಗಳುಲಿದಪ್ಪುದು ಕೋಗಿಲೆ ಕಂತು ಬಿಲ್ಲನೇ
ಱಿಸಿದಪನೀಗಳೀಗಳೆಲೆ ಸುಗ್ಗಿಯುದೊದು ಪೊಡರ್ಪಿದಾಗದೇ ೩೭೬

( ಭವಿಷ್ಯಂತಿಗೆ )

ಮಹಾಸ್ರಗ್ಧರೆ.

೩. ಕಡುಕೆಯ್ದಾಂತನ್ಯ ಸೈನ್ಯಂಗಳನಳಱಿ[1] ಭರಂಗೆಯ್ದು
ನಿಮ್ಮೊಂದೆ ಮೆಯ್ಯೊಳ್
ಕಿಡಿಸಲ್ ಸಾಲ್ವಿರ್[2] ಸಮಾಸಾದಿತರಣರಸಿಕರ್ ನಿಮ್ಮ
ಮುಂದಾದಮಣ್ಮಂ
ನುಡಿವಾಗಳ್ ನಾಡೆ[3] ಲಜ್ಜಾಕರಮದಱಿನದಂತಿರ್ಕೆ
ಜೀಯೆಂಬಿನಂ ಮಾ
ರ್ಪಡೆಗೆನ್ನೀ ಬಾಳಕೇಳೀವಿಳಸನ[4]ಮನದಂ ಯುದ್ಧದೊಳ್
ನಾಳೆ ತೋರ್ಪೆಂ ೩೭೭

(ವಿಧ್ಯಾದಿಗೆ)

೪. ಮರ್ಚದಿರು[5] ಬಸನಮಂ ಗಿಳಿ
ಗರ್ಚದಿರು[6] ಖಳಸ್ವಭಾವಮಂ ಮನೆಯತ್ತಲ್
ಸಾರ್ಚು ಹಿತರಪ್ಪರಂ ಸಲೆ
ಪೆರ್ಚಿಸು ತಳವರ್ಗಮಂ ಪಂನಂಗೊಳೆ ಮಗನೇ ೩೭೮

---

೧. ಸಳುಱಿ. ೨. ಸಾರ್ವಿರ್. ೩. ನೋಡೆ. ೪. ವಿಳಸಿತ.
೫. ರಿಸು ೬. ದಿರ.

### ಸೂತ್ರಂ ೮೫

ಕವದಿನವ.ರರಯಿರೆನೆವೆನಿ
ಪ್ಪುವು ವರ್ತಿಕುಮುನ್ಯಯುಷ್ಮದಸ್ಮದ್ವಿಷಯ
ವ್ಯವಹೃತಿಗಳ್ಗೇಕಾ[1]ನೇ
ಕವಚನದಿಂ ಪ್ರತಿವಿಭಕ್ತಿಪುರುಷಾಖ್ಯಂಗಳ್ ೩೭೯

ಪ್ರಯೋಗಂ.

( ಪ್ರಥಮ ಪುರುಷಕ್ಕೆ )

೧. ತೊಟ್ಟಂ[2] ಸಂಮೋಹನಮಂ
[3]ತೊಟ್ಟನೆ ಭುಜವಿಜಯಶಾಲಿ ಫಲ್ಗುಣನಾಗಳ್
ಪುಟ್ಟಿದ ನಿದ್ರಾಭರದಿಂ[4]
ದೊಟ್ಟಯ್ಸಿ[4] ವಿರೋಧಿಭೂಭುಜರ್ ಮೆಯ್ಮಱೆದರ್ ೩೮೦

(ಮಧ್ಯಮ ಪುರುಷಕ್ಕೆ)

೧. ಮಡಿದಯ್ ಪೊಚ್ಚಱಮಾತಂ[5]
ಬಿಡದೆನ್ನೊಳ್[6] ಜಱುಚುತಿರ್ಪುದಾವುದು ಗಂಡು
ಳ್ಳೊಡೆ ಮೊನೆಗಿದಿರ್ಚಿ ಬರವೇಟ್ಪು
ತೊಡರ್ದಾ[7]ಗಳ್ ಕಾಣ್ಬೆವೆಮ್ಮ ನಿಮ್ಮೊಂದಳವಂ ೩೮೧

೧. ಗಳಿನೇಕಾ. ೨. ತೊಟ್ಟರೆ. ೩. ನೆ. ೪-೪. ಭರಮಿರ! ದೊಟ್ಟ್ಯಸೆ. ೫. ಮಾತನೆ ೬. ದೆಮ್ಮೊಳ್. ೭. ತೊಡರ್ದಾಗಡೆ



(ಉತ್ತಮಪುರುಷಕ್ಕೆ)

೨. ಅಸುರಹರಂ ತೇರಂ ಸ
ಯ್ತುಸಗುವನಾಂ ಕೀಱು ನಿಂದು ಬಿಲ್ಗೊಳ್ವೆನೆನಲ್
ವಿಸಸನಮುದಾವುದರಿಂದ
ರ್ಕಸೂನುವಂ ಕೊಂದೆವೆಂದು ನಿಶ್ಚಿಂತಮಿರಿಂ ೩೮೨

### ಸೂತ್ರಂ ೮೬.

ಮಿಗದಾ ಸ್ವಾರ್ಥದೊಳಂತವು
ನೆಗಱ್ಗಂ ತಂತಮ್ಮ ಸಾಧನಂಗಳೊಳನಿತುಂ
ಯುಗಪತ್ಪ್ರಯೋಗಮಾದಂ
ದು ಗಣನೆಯೊಳ್ ಮುಂದೆ ನಿಂದುದಾವುದದಕ್ಕುಂ[1] ೩೮೩

ಪ್ರಯೋಗಂ. (ಸ್ವಾರ್ಥಕ್ಕೆ)

ಶಾರ್ದೂಲವಿಕ್ರೀಡಿತಂ.

೧. ಎಂದಿಂತಾತನನಂದು ನಂಬಿಸಿದೊಡಾ ಮತ್ಸ್ಯಾತ್ಮಜಂ ನಂಬಿ ಸಾ
ನಂದಂ ಬಂದು ಸುರೇಂದ್ರಸೂನುಗೆ ತುಱಿಲ್ಗೆಯ್ದಂದನಾನಿನ್ನೆಗಂ
ಬಂದಯ್ ನೀಂ ದಯೆಯಿಂದಮಾನಱಿದೆನಿಲ್ಲೀಗಳ್
ಮನಂದಂದೆನಿ
ನ್ನೊಂದು ಸಂದೆಯುಮಿಲ್ಲ ತೇರನೆಸಪೆಂ ನೀಂ ಕಾದಿ ಗೆಲ್
ಫಲ್ಗುನಾ ೩೮೪

೧ ದಕ್ಕಂ.

(ಯುಗಪತ್ಪ್ರಯೋಗಕ್ಕೆ)

೨. ಆಮುಂ ದ್ರೋಣರು[1] ಮಶ್ವ
ತ್ಥಾಮನುಮಂಗಾಧಿರಾಜನುಂ ಕೃಪನುಂ ಸಂ
ಗ್ರಾಮದೊಳಾಂಪೆವರಾತಿಯ
ನೇಮಾತಡಿಯೆತ್ತು ತಡೆಯದಿರ್ ಭುವನಪತೀ ೩೮೫

## ಸೂತ್ರಂ ೮೭

ದದಪವಕಾರಂಗಳ್ ಮೂ
ಲದೊಳಕ್ಕುಂ ಭೂತವರ್ತಮಾನಭವಿಷ್ಯದ್
ವಿದಿತವಿಭಕ್ತಿತ್ರಿತಯ
ಕ್ಕದೆಲ್ಲವಚನಂಗಳೊಳಮಿದಾಗ[2] ಮಮಕ್ಕುಂ. ೩೮೬

ಪ್ರಯೋಗಂ.

(ಭೂತವತಿಗೆ)

ಉತ್ಪಲಮಾಲೆ.

೧. ಆಡಿದನಿಂದ್ರನಿಂದ್ರಗಣಿಕಾಗಣ[3] ಮಟ್ಕುಜಿಳೊಲ್ದು ಮಂಗಳಂ
ಬಾಡಿದುದಬ್ಜಜಂ ಪರಸಿ ಸೇಸೆಯನಿಕ್ಕಿದನದ್ರಿ ತಾನೆ ಮುಂ
ಡಾಡಿ ವಿಭೂತಿಯಿಂದೊಸಗೆ ಮಾಡಿದನಂಗಜನಂಗಲಕ್ಷ್ಮಿಯೊಳ್
ಕೂಡಿದನೆಂದೊಡೇವೊಗಟ್ಟುದೋ ಭವಶೈಲಭವಾ
ವಿವಾಹಮುಂ ೩೮೭

---

೧. ನು. ೨. ಗಿದಾಗ. ೩. ಜನ.



(ವರ್ತಮಾನಕ್ಕೆ)

೨. ಮಾಡಿದಪಂ ಖಳಸಮಿತಿಗೆ
ಕೇಡಂ ತಕ್ಕರನುದಾತ್ತಮಹಿಮೋನ್ನತಿಯೊಳ್
ಕೂಡಿದಪಂ ನೀಡಿಲ್ಲದೆ
ನೀಡಿದಪಂ ಬೇಟ್ಟವಂಗೆ ಬೇಟ್ಟುದನಿಂದ್ರಂ ೩೮೮

(ಭವಿಷ್ಯಂತಿಗೆ)

ಉತ್ಪಲಮಾಲೆ.

೩. ಬರ್ಪನ[1] ಮೋಘಮಬ್ದಸಮಯಕ್ಕೆ ಪಲುಂಬುದೆ
ಪಾರುತಿರ್ಪುದಾಂ
ಬರ್ಪುದನೆಂದು ಪೋದನಿನಿಯಂ ಜಲದಾಳಿಗಳಂತಿವೀಗಳೇ
ಬರ್ಪುವೆ ಬಂದನಿಲ್ಲ ತಡೆದಂ ಪರದೇಶದೊಳಾದ ಮರ್ಜನಿಂ
ಕೂರ್ಪೊ[2]ಡೆ ಬರ್ಪರಿಲ್ಲದೊಡೆ ಬರ್ಪರೆ ಕಲ್ಲೆದೆಯಪ್ಪ[5]
ಮಾನಸರ್ ೩೮೯

## ಸೂತ್ರಂ ೮೮.

ಭಾವಿಭವತ್ಕಾಲಂಗಳೊ
ಳಾ ವಿಹಿತವಿಭಕ್ತಿಯಾದಿ[5]ಗಳೊಳಾಗಮದಿಂ
ತಾವೊಲ್ವರ್ ಕೆಲಬರ್ ಭಾ
ಷಾವಿದುರದ್ವಾದಿಯಕ್ಕುಮದುವುಂ ಪ್ರಾಯಂ ೩೯೦

---

೧. ಬರ್ಪಿನ. ೨. ಕೂರ್ಪರೆ. ೩. ಬರ್ಪರಲ್ಲ. ೪. ಕಲ್ಲೆರ್ದೆಯಾದ.
೫. ಯಾದ

## ಸೂತ್ರಂ. ೮೯

ಅವಱೊಳಗೆ ನಪುಂಸಕಲಿಂ
ಗವಿಷಯಮಾದಲ್ಲಿ ಮೊದಲ ಪುರುಷಂಗುದುವೆಂ
ಬುವೆ ದಲ್ ಸಮನಿಸುಗುಂ ಸ್ತ್ರೀ
ವಿವಕ್ಷೆಯೊಳ್ ನೆಗೞ್ಗುಮೇಕವಚನಮಳಂತಂ ೩೯೧

ಪ್ರಯೋಗಂ

೧. ಊದಿದುದು ತಣ್ಣೆಲರ್ ಕಳ
ನಾದಂ ಸಾದರ[1]ದೊಳೊಂದಿ ನೆಗೞ್ದುದು ಪದ್ಮಾ
ಮೋದಮಿನಿಸುಂ[2] ತೊವರ್ ತೊವ
ರಾದುದು ಕೂಗಿದುವು ತಾಮ್ರಚೂಡಕುಳಂಗಳ್ ೩೯೨

೨. ಅಱಿವಳ್ ಪಾಂಡುತನೂಜರ
ತೆಱನೆಲ್ಲಮನೀಕೆ ನುಡಿವಳಲ್ಲಳ್ ತಪ್ಪಂ
ಮಱಸಿ ಪುಸಿನುಡಿವ ಜಱುಚರ
ತೆಱನಂ ಕಂಡಱಿಯದಂತು ಕುಳಿಯರುಮೊಳರೇ ೩೯೩

## ಸೂತ್ರಂ ೯೦

ಅರೆಬರ್ ತದೇಕವಚನಾಂ
ತರಂ ನಪುಂಸಕದೊಳಾಗೆ ತುತ್ತ್ವನ್ಯತರಂ

೧. ಗಾಂಧಾರ; ಗಾಂದರ. ೨. ಸಂ.



ದೊರೆಕೊಳ್ಗುಮೆಂಬರವು ಮುಂ
ತಿರೆ[1] ಪೊರ್ದುಗುಮುಮರ್ದಿಕಾರಮಕ್ಕೆಯಕಾರಂ[1]

ಪ್ರಯೋಗಂ.

೧. ಮುಟ್ಟಿತು ಮುಟ್ಟದು ದಿವಮುಂ
ಮೆಟ್ಟಿತು ಮೆಟ್ಟದು ರಸಾತಳಾ[2]ಗ್ರಮನೆಂಬೊ
ಳ್ಪಿಟ್ಟಳವಾಗಿರೆ ದಿವಿಜರ
ದಿಟ್ಟಿಗೆ ಸೊಗಯಿಸಿತು[3] ಮುಂದೆ ಮಂದರಶೈಲಂ ೩೯೫

ಪಂಚಚಾಮರವೃತ್ತಂ.

೨. ಉರಗರಗಿದರ್ ದೈತ್ಯರ್ ಬೆಳ್ಕುತ್ತಿರಲ್ಕಿದನಿಂದ್ರ ನೀ
ಶ್ವರನ ಮನೆಮುಬ್ಬಾಡಿ[4] ತ್ತೋಡಿತ್ತು[5]ಕಿನ್ನರ ಸೈನ್ಯಮಾ
ಸರಲ ಬರಮಂ ಕಂಡಿಂ ಕೆಟ್ಟತ್ತು ಭಾರತಮೆಂದು ತಾ
ವರಿಯಲೆಯ ನೀರಂತಾಯ್ತಿತ್ತಂ ಸುರಾಸುರಮಂಡಲಂ ೩೯೬

## ಸೂತ್ರಂ ೯೧

ಅವಿಶಿಷ್ಟಲಿಂಗವಚನ
ವ್ಯವಸ್ಥೆಯಿಂದೊಂದಿ ಗುಂ ಕುಮಾದೇಶಂಗಳ್
ಬವರಿಸುಗುಂ ಸಂಪ್ರತಿಗಂ
ಭವಿಷ್ಯದರ್ಥದೊಳಮನ್ಯವಚನೋಕ್ತಿಗಳೊಳ್ ೩೯೭

೧–೧. ಪೊರ್ದುಗೆಯುಮರ್ದಕಾರಮುಕ್ಕುವಿಕಾರಂ. ೨. ತಳಾಂತ. ೩. ಯಿಪುದು. ೪. ಮಳ್ಬಾಡಿ. ೫. ತ್ತೊತ್ತಿತ್ತು.

ಪ್ರಯೋಗಂ

ಉತ್ಪಲಮಾಲೆ.

೧. ಮಿಱುಗುಮಲ್ಲಿ ದೇವರೆಡೆವೊಕ್ಕಡಮಾತ್ಮಭುಜಪ್ರತಾಪಮಂ
ತೋಱುಗುಮುರ್ಕಿದನ್ನ[1] ನೃಪನಂದನರಂ ತವೆ ಕೊಂದು ಕಾಯ್ಗಳಂ[2]
ತೀಱುಗುಮಾಗಳಲ್ಲಿ[3] ತೊಡರ್ದಾರುಮನುಗ್ರ ಪತತ್ರಿಭಾರಮಂ
ಪೇಱುಗುಮಂತುಮಾಂತೊಡವರಂ ಬಡಿಯೊಳ್
ಪುಡಿಗುಟ್ಟಿ ತೂಱುಗುಂ ೩೯೮

೨. ಅರ್ಕೇಂದುಗಳಂ ತವೆ ನುಂ
ಗಿರ್ಕುಂ ಕಟ್ಟಲೆ ಸಿಡಿಲ್ಗಳೆಱಗುಗುಮಂತುಂ[3]
ಬರ್ಕುಂ ನಿನ್ನೋಪಳ್ ಭಯ
ಮಿರ್ಕುವೆ ಸೀನಿರ್ಪ ಮನದೊಳುಗ್ರತುಳಾರ್ಕ[4] ೩೯೯

## ಸೂತ್ರಂ ೯೨

ಉಗೆ ಕೆ[5] ವಿಕಲ್ಪಿತಮನ್ಯಾ
ರ್ಥಗತಿಯೊಳುತ್ವೇತ್ವ[6] ಯುಕ್ತಿ[7] ಯುಷ್ಮತ್-ಸಂಜ್ಞೋ
ಕ್ತಿಗಳೊಳಮ[8] ಸ್ಮದ್-ಬಹುವಚ
ನಗತಿಯೊಳಂ ನೆಗಳ್ದ ಸರ್ವಸಾಧನಿಗಕ್ಕುಂ ೪೦೦

೧. ಮುರ್ಕಿದಂದು. ೨. ಕಾಯ್ಗಳಂ; ಗಾಯ್ಗಳಂ. ೩. ಮಲ್ಲಿ. ೪. ಮೆಂತುಂ. ೫. ತಳಾ. ೬. ಗೆ. ೭. ಯೊಳಂ ತತ್ವ. ೮. ಯುಕ ೯. ಗಳೆಂದ.



ಪ್ರಯೋಗಂ.

(ಅನ್ಯಾರ್ಥಗತಿಗೆ)

ಉತ್ಪಲಮಾಲೆ.

೧. ಮೇದಿನಿ ಸಾಗರಾಂತಮದು ನಿನ್ನನೆ ಪತ್ತುಗೆ ನಿನ್ನ ವಕ್ಷದೊಳ್
ಶ್ರೀ ದೊರೆಕೊಂಡು ಪೆರ್ಚು[1] ವೆರಸಿರ್ಕೆ ಸಮಂತು [2]ನವಗ್ರಹಂಗಳೇ
ಕಾದಶಮಕ್ಕೆ ಕೀರ್ತಿ ಪರೆದಿರ್ಕೆ ಜಯಾಂಗನೆ ಕೂರ್ಕೆ[3] ನಿಚ್ಚಲುಂ
ವೇದದೊಳೋದಿ[4] ದಾಯು ನಿನಗಕ್ಕೆ ಚಿರಂ ಕಲಿಕಾಲ
ಸೂದನಾ[6] ೪೦೧

( ಯುಷ್ಮತ್-ಸಂಜ್ಞೋಕ್ತಿಗೆ)

೨. ವಾಯಸದಂತೆ ನೋಡು ಬಕನಂತಿರೆ ಮೆಲ್ಲನೆ ಮೆಟ್ಟು ಕಚ್ಛಪೋ
ಪಾಯದಡಂಗು[7] ನಿಲ್ ಭ್ರಮರಿವೋಲ್ [8]ಭ್ರಮಿಯಂತಿರೆ
ಬೆಚ್ಚರಾಗು ಖ
ಟ್ಟಾಯುಧಚಾಪಮಂ[9] ಪೊಳೆವ ಮಿಂಚನೆ ಪೊಲ್ತಿರೆ[10]
ಬೀಸು ನೀಂ ಖಳ
ನ್ಯಾಯದಿ[11] ನೆಲ್ಲಮಂ ನೆಱೆಯೆ ಕಲ್ತುಪದೇಶಕನಾಗು
ಲೋಕದೊಳ್ ೪೦೨

೩. ಹರಿ ನುಡಿಯೆ ನುಡಿಯಿಮುಲಿಯಲಿ
ವಿರಿಮುಸಿರಲಿಮತ್ತಸಾರಿಮೆಲೆ ಮಿಡುಕದಿರಿಂ
ಪಿರಿದುಂ ಗಬಪಲಿ [12]ಮೆಡೆಗೊಂ
ಡಿರದಿರಿ[12] ಮೆನುತಿರೆ ಕಡಂಗಿ ಪಡಿಯಱಿರೆತ್ತಂ ೪೦೩

೧. ಪರ್ಚ್. ೨. ೩. ಸಮಸ್ತ. ೪. ಕೂರ್ಗೆ. ೫. ಕೊಂದಿ ೬. ಸೊಗಂ ೭. ಸಾಧನಾ. ೮. ಡಂಗಿ ೯. ಯೊಳ್ ೯. ಚಾಮರಂ ೧೦. ಪೊತ್ತಿರೆ ೧೧. ನ್ಯಾಯುವ ೧೨-೧೨. ಮೊಡೆಗುಡ| ದಿರಿಮಿ.

(ಅಸ್ಮದ್-ಬಹುವಚನ ಗತಿಗೆ)

೪: ನೆನೆಯದೆ ಕಜ್ಜದ ಬಿಣ್ಪಂ
ಮುನಿವಯ್ ನೀನೋರ್ವನೆಂಬ ಹರಿಗಮಸಾಧ್ಯಂ
ಮನುಜಪ್ರಾಕಾರಾಂಕ[1]ನೊ
ಳನಿಬರುಮೊಂದಾಗಿ ತಾಗುವಂ ಫಲ್ಗುಣನೊಳ್ ೪೦೪

## ಸೂತ್ರಂ ೯೩.

ತದುಪಗತಮಧ್ಯವ್ಯೈಕ
ತ್ವದೊಳಕ್ಕುಂ ಪ್ರಾಯದಿಂದಿಕಾರಮುಕಾರಂ
ವಿದಿತಸ್ವರೂಪಲೋಪಮು
ಮದಂತೆ ಪೞವುೞಯೊಳಂ ಪ್ರಕೃತ್ಯಂತದೊಳಂ[2] ೪೦೫

ಪ್ರಯೋಗಂ.

ಚಂಪಕಮಾಲೆ.

೧. ಬಗಿ ಪುಗು [3]ಬಿಟ್ಟು ಕೂಡು[3] ಜಡಿ ಬಗ್ಗಿಸು [4]ಪೊಯ್ ನೆಲೆ[4]
ನೋಡು[5] ಸಾಯೆ ಸಾ
ರ್ದುಗಿ ಕೊಳೆ ನೂಂಕು[6] ಸಾರ್ಚು ಕಡೆ[7] ದೋಱೊಡ
ಸಂದಿಸು ಸಾರ್ದು ದಂಡೆ[8]ಗೊಳ್

೧. ರಾಂತು. ೨. ತರದೊಳ್ ೩-೩ ಬಿಟ್ಟುಕೂಡೆ. ೪. ಮೆಯ್ ನಿಲೆ
೫. ಸಾಯಿ; ಸಾಯಿ. ೬. ನೂಂಕಿ. ೭. ಕಡಿ. ೮. ಡಂಗೆ.



ಪುಗದೆಡೆಮಾಡು ಚಪ್ಪರಿಸು ರೂಪಿಡು ಕೂಪಿಡು[1]
ಕೂರ್ಪುದೋ[2]ಱು ಸಾ
ಱಗಿಯದೆ ಕೂರ್ಮೆ ಮಿಕ್ಕು ತೆಗೆ[3] ತೊಂಗಲನಿಂಬೆನೆ
ನೂಂಕು ಯುದ್ಧಮಂ[4] ೪೦೬

## ಸೂತ್ರಂ ೯೪.

ಕ್ರಿಯೆ ತಾಂ ಕ್ರಿಯಾರ್ಥಮಪ್ಪ
ಲ್ಲಿಯಲಕ್ಕುಂ ವರ್ತಮಾನಗತಿಗುತ್ತುಮುತುಂ
ದ್ವಯಮಕ್ಕುಂ ಪೂರ್ವಭವ
ಕ್ರಿಯೆಯೊಳಿದುತ್ ಪ್ರತ್ಯಯಂಗಳಕ್ಕುಂ ಪೀನಂ ೪೦೭

ಪ್ರಯೋಗಂ.

೧. ತಿಂಗಳನಪ್ಪಿಕೊಳಲ್ ಸಾ
ವಿಂಗಂ ಬೆಲೆಯಿಕ್ಕಲಮರಗಿರಿಶಿಖರಕ್ಕಂ
ಲಂಗಿಸಲೊಡರಿಸುವರ್ ಪ
ರ್ವಂಗಳ್ ಪತ್ತೆಂಟು ದಿವಸಮೆನೆ ಬೆಲೆವೆಣ್ಗಳ್ ೪೦೮

ಮತ್ತೇಭವಿಕ್ರೀಡಿತಂ.

೨. ಕೆದಱುತ್ತುಂ ಮಣಲಂ ತಿಮುಳ್ದಿ ಕೊಳುತುಂ ಭೂರೇಣುವಂ
ಸೂಸುತುಂ
ನದನದ್ಯಚ್ಛಜಲಂಗಳಂ ಮಱಯುತುಂ ಭೂಜಂಗಳಂ ಸುರ್ಗುತುಂ

೧. ಕಾಪಿಡು. ೨. ನೇಪುರ. ೩. ನೆಗೆ ೪. ಬಿರ್ದನಂ.

ಪೊದಱಿಂ ಸೀಳುತುಮೆಯ್ದೆ ವಂಶವನಮಂ ಕಾಡಾನೆಯಂ
ಪೋಲ್ತು ಪೊ
ಕ್ಕುದು ಬೀಡಂ ಲಯಕಾಲಕಾಲವಿಚಲದ್ಬ್ರೀ[1] ಮಾರುತಂ
ಮಾರುತಂ ೪೧೯

ನಡುಗಿ ತಡವರಿಸಿ[2] ಬೆಂಕೆಯ
ಕಡುಗಾಯ್ಪಿಂಗಗಿದು ಜೆಡೆಗಳಿಡುವಿನೊಳಹಿಗಳ್[3]
ತೊಡರ್ದುನುಸುಳ್ದೋಡಿ[4] ಗಂಗೆಯ
ಮಡುಗಳನಡಹಡಿಸಿ[5] ಪುಗುವಿನಂ ಭಯವಶದಿಂ

## ಸೂತ್ರಂ ೯೫

ಪ್ರತಿಷೇಧದೊಳಂ ಕೆಲಬರ
ಮತದಿಂದಲ್ ಪರ್ತಿಕುಂ ಪದಾಂತರದಿಂ ಸಂ
ಗತಿಯಾಗಲ್[6] ಲೋಪಂ[6] ಮೇಣ್
ಚತುರ್ಥಿ ಸಮುಸಲ್ಗುಮೆಂಬರದಱಿಂಳ್
ಕೆಲಬರ್ ೪೧೧

**ಪ್ರಯೋಗಂ:**

೧. ನಗೆಯೊಳುಮಪ್ಪೊಡಮಿಂತೀ
ತೆಗಬಿ ದುರುಕ್ತಿಗಳನೆನ್ನೊಳ್ಮೆಲಿಂ ನುಡಿಯಲ್ ಸೀಂ

---

೧. ವಿಲಸ. ೨. ದಡಿಸಿ. ೩ ಳಹಿತರ್. ೪. ನುಸುಳ್ದೋಡೆ.
೫. ಮಡುವಿನೊಳಟಲಟಿಸಿ. ೬–೬. ಯಾಗೆಲೋಪಮಂ.



ಬಗೆಯೊಳ್ ಬೇಱೊಂದನಣಂ
ಬಗೆಯಲ್ ಗಡ ನಿನಗೆ ಸುಮತಿ ಬೇಱಾಂ ಬೇಱೇ ೪೧೨

( ಅಪರಾರ್ಥಕ್ಕೆ )

೨. ತರವೇಱ್ ಮದವಾರಣಮಂ
ಬರವೇಱ್ ಸನ್ನದ್ಧವಾಜಿಸಾಧನಮಂ ಬಿ
ತ್ತರಿಸಲ್ಕೆ[1] ವೇಱ್ ವರೂಥೋ
ತ್ಕರಮಂ ಬಲಿದೊಡ್ಡವೇಱ್ ಪದಾತಿಯನೀಗಳ್ ೪೧೩

## ಸೂತ್ರಂ ೯೬

ಎಸೆಗುಂ ಭಾವದೊಳ್[2] ಮರ್ದೇ
ಕಸಂಜ್ಞ[2] ವಚನಂ ಕ್ರಿಯಾಸಮಭಿಹಾರಂ ವ
ರ್ತಿಸುತಿರೆ ತಾನಕ್ಕುಂ ಸ
ರ್ವಸಾಧನೀಮಧ್ಯಮೈಕವಚನಮದೆಂದುಂ[3] ೪೧೪

**ಪ್ರಯೋಗಂ.**

( ಭಾವಾರ್ಥಕ್ಕೆ )

೧. ಸಿಡಿಲಂ ಪೊಸೆವುದು[4] ಶೇಷನ
ಪೆಡೆಯೊಳ್ ಪಟ್ಟೈರ್ಪುದೆಂಟು[5] ಮಾನೆಯ ಕೋಡಂ

---

೧. ತ್ತರಿಸಿ ಬರ. ೨–೨. ಳವಱೇ।ಕಸಂಜ್ಞೆ. ೩. ದೊಂದುಂ ೪. ಪೊಸೆ
೫. ದೆಂದು.

[1]ಪಿಡಿದೊತ್ತಿ ಕೀೞ್ವುದೇೞಂ[1]
ಕಡಲೊಳಗೋಲಾಡುತಿರ್ಪುದವನ ವಿನೋದಂ ೪೧೬

( ಕ್ರಿಯಾಸಮಭಿಹಾರಕ್ಕೆ )

೨. ಕೊಳ್ಕೊಳ್ಳೆಂದೊಡನೊಡನೆಯೆ
ತುಳ್ಕುವ ಯುವತಿಯರ ಕರಪರಿಚ್ಯುತಸಲಿಲಂ
ಗಳ್ಕೊಳೆ ಬಿಡೆ ಕೆದಱುವ ಕಿಂ
ಜಳ್ಕದಿನಾದುದು ಸರೋವರಂ ಕಪಿಶಜಳಂ

## ಸೂತ್ರಂ ೯೭

ಧಾತುಗನೇಕಾಕ್ಷರಕಾ
ಖ್ಯಾತವಿಭಕ್ತಿಗಳ ಮೊದಲೊಳಿಸು ತಾನಕ್ಕುಂ
ಹೇತುಪ್ರಯೋಗದೊಳ್ ತ
ಜ್ಜಾತಿಯೆ ಕರ್ಣಾಟಧಾತುಗಳ್ಗಮರ್ದಿರ್ಕುಂ[2] ೪೧೭

ಪ್ರಯೋಗಂ
ಮಹಾಸ್ರಗ್ಧರೆ.
೧. ಎಸೆಗುಂ ಋಜ್ವಾಗತಂ ಕಣ್ಗೊಳಿಸುಗುಮಳವಟ್ಟರ್ಧ
ಋಜ್ವಾಗತಂ ಶೋ
ಭಿಸುಗಂ ಪಾರ್ಶ್ವಾಗತಂ ನೋಳ್ಪರನೆಱಗಿಸುಗಂ ಸಾಚಿ
ತದ್ವಿದ್ವ್ಯರಂ ರಂ

೧. ಪಿಡಿದುಡಿದುಕೊಳು ೨. ಮುವಕ್ಕುಂ; ನುವಕ್ಕುಂ. ೩. ವಟ್ಟರ್ದ



ಜಿಸುಗುಂ ದ್ವ್ಯರ್ಧಾಕ್ಷಿಯೆಂಬಂತೆವೊಲಿರೆ ನೆಗಟ್ದಿರ್ದಂಗ
ನಾಭಂಗಿಯಂ ಚಿ
ತ್ರಿಸಿ ಚಿತ್ರಕ್ಕಾಯುವೊಯ್ದಂ ಮದನನೆನೆಕರಂ[1] ಕಾಂತೆ
ಕಣ್ಗೊಪ್ಪಿ ತೋರ್ಕುಂ[1] ೪೧೮

(ರನ್ನನ ಅಜಿತತೀರ್ಥಂಕರಪುರಾಣತಿಲಕಂ ೨-೪೮)

(ಇಲ್ಲಿ ಉಪಾಂತಕ್ಕೆ ಲಘ್ವೇಕಾಕ್ಷರಕ್ಕೆ ಇದಂತ-ಪ್ರಯೋಗಂ)

೨. ಸುರರೊಸೆಯೆ ಸಕಳ...........ಮ
ಸುರನಿಕರಮತರ್ಕ್ಯಮಪ್ಪ ವಿಕ್ರಮಗುಣಮಂ
ಧರಿಯಿಸಿ ಸಂದಿರ್ದಂ ಭಾ
ಸುರತೇಜನುದಾತ್ತ ಕೀರ್ತಿನಿಳಯಂ ಕೃಷ್ಣಂ ೪೧೯

೩. ಪ್ರಕೃತಿಗಳಂ ಧಾತ್ವರ್ಥದ
ವಿಕಲ್ಪದಿಂದಱಿದು ಸಮಱಿಕೊಳ್ವುದು ಬಹುರೂ
ಪಕ[3]ಮನದಂ ಪೇೞಲ್ಕಾ[3]
ಸಕಳಂ ವಾಕ್ಪತಿಯುಂ ಮಾಱನುಱಿದವರಳವೇ ೪೨೦

೧-೧ ಮಹಾದೇವಿ ಕಣ್ಗೊಪ್ಪಿ ತೋರ್ಪಳ್. ೨. ದಾರ.
ಮನವಳಂಬಿಸಲ್ಕಾ. ೩—೩.

೪. ಪ್ರತಿಬುದ್ಧರಂ ಕುಱಿತ್ತೀ
ಸ್ಥಿತಿಯಿಂದಂ ಕಿಱಿದು ಮಾರ್ಗಸೂಚನೆಗೆಯ್ದಂ
ಮತಿವಂತರಱಿದು ಪೇೞ್ವುದು
ವಿತರ್ಕದಿಂ ಮತ್ತ ಮುಕ್ತ ಶೇಷಮನಿದಱೊಳ್ ೪೨೧

ಇದು ಶಬ್ದಸ್ಮೃತಿಯೊಳ್ ಆಖ್ಯಾತ ಪ್ರಕರಣಂ ಸಮಾಪ್ತಂ



ಗೀತಿಕೆ

ಇಂತಿರೆ ಶಬ್ದಂ ಸಂದೇಹ
ಧ್ವಾಂತೌಘಂ ಪಿಂಗಿರೆ ಜಲಕನಾಗೆ ಬುಧ
ಸಂತತಿಗಪ್ಪಂತು ಪೇೞ್ದನಿದಂ
ಶಾಂತಮನಂ ಕವಿತಾಗುಣೋದಯಂ ೪೨೨

ಚಂಪಕಮಾಲೆ.

ಅಭಿಮತ ಶಬ್ದ ಸಂಸ್ಮರಣದಿಂ ಜನಮಂ ತಿಳಿವಂತು ಮಾಡಿ ವಾ
ಗ್ವಿಭವಮದಪ್ರತರ್ಕ್ಯಮೆನೆ ಸಂದೆಸಕಂ ದೆಸೆಯಂತನೆಯ್ದೆ ತತ್
ಸಭೆಗಳೊಳಗ್ರ[1] ಪೂಜೆವಡೆದೊಂದು ಮಹಾಮಹಿಮಾನುಭಾವದಿಂ
ದಭಿನವಶರ್ವವರ್ಮನಿವನೆಂದಪುದುರ್ವರೆ ನಾಗವರ್ಮನಂ ೪೨೩

ಇದು ಸಕಳಸುಕವಿಜನಮನಸ್ಸರೋಜಿನೀರಾಜಹಂಸಾಯ
ಮಾನಾನೂನಕವಿತಾ ಗುಣೋದಯಂ.
ಶ್ರೀ ನಾಗವರ್ಮಪ್ರಣೀತಮಪ್ಪ ಕಾವ್ಯಾವಲೋಕನದೊಳ್

ಶಬ್ದಸ್ಮೃತಿಯೆಂಬುದು ಪ್ರಥಮಾಧಿಕರಣಂ ಸಮಾಪ್ತಂ.

೧. ಸಂಸ್ಕರ.

# ಒಪ್ಪೋಲೆ

| ಪದ್ಯಸಂಖ್ಯೆ | ಪುಟ | ಸಾಲು | ತಪ್ಪು | ಒಪ್ಪು |
|---|---|---|---|---|
| ೧ | ೧ | ೪ | ವಾವ್ಯದೊಳ್ | ಕಾವ್ಯದೊಳ್ |
| ೩ | ೧ | ೪ | ಕಾವ್ಯಾಲೋಕಮಂ | ಕಾವ್ಯಾವಲೋಕಮಂ |
| ೪ | ೧ | ೧ | ಕೈಯ್ಗನ್ನಡಿ | ಕೆಯ್ಗನ್ನಡಿ |
| ೪ | ೧ | ೪ | ನಿಲ್ಪುದೊಂದಚ್ಚರಿಯೋ | ನಿಲ್ವುದೊಂದಚ್ಚರಿಯೋ |
| ೫ | ೨ | ೧ | ಶಬ್ದಶ್ಮೃತಿ | ಶಬ್ದಸ್ಮೃತಿ |
| ೬ | ೩ | ೧ | ಪೇಱಿಪಟ್ಟರ್ದ | ಪೇಟಿಪಟ್ಟರ್ದ |
| ೬ | ೩ | ೧ | ಶಬ್ದಸಿದ್ದಿ | ಶಬ್ದಸಿದ್ಧಿ |
| ೬ | ೩ | ೨ | ನಿಲ್ಕು | ನಿಲ್ಕುಂ |
| ೭ | ೩ | ೩ | ಪದಿನಾಲ್ಕಂ | ಪದಿನಾಲ್ಕುಂ |
| ೮ | ೩ | ೪ | ಪರಿವಿಡಿವಿಂ | ಪರಿವಿಡಿಯಿಂ |
| ೧೦ | ೪ | ೬ | ಹೃಸ್ವಂ | ಹ್ರಸ್ವಂ |
| ೧೫ | ೫ | ೧೧ | ದಯ್ಯುಗೆಯ್ದು | ದಯ್ದುಯ್ದುಗೆಯ್ದು |
| ೧೮ | ೬ | ೭ | ಸೊಂಜ್ಕು | ಸೊಜ್ಕು |
| ೧೮ | ೬ | ೮ | ಗಾಳಿಯುಮದೇಂ ಮನಜ್ಮಾಳಿಸಿದುವೋ | ಗಾಳಿಯುಮದೇವ್ಮನಜ್ಕೊಳಿಸಿದುವೋ |
| ೨೨ | ೭ | ೩ | ಪದೊರೆಕೊಂಡ | ದೊರೆಕೊಂಡ |
| ೨೩ | ೭ | ೮ | ನಳಸಿರ್ದರೊಳ್ | ನಳುರ್ದುಸಿರೊಳ್ |
| ೨೩ | ೭ | ೮ | ಮಿಳಿರ್ದ | ಮಿಳಿರ್ದು |
| | ೭ | ೯ | ತೊರೆಗುಳ | ತೊರೆಗಳ |

| ಪದ್ಯಸಂಖ್ಯೆ | ಪುಟ | ಸಾಲು | ತಪ್ಪು | ಒಪ್ಪು |
|---|---|---|---|---|
| ೨೫ | ೭ | ೧೧ | ಮೊರೆದರಗುವರಿಯ | ಮೊರೆದೆಱಗುವರಿಯ |
| ೨೬ | ೮ | ೧ | ಕಟಿಲೆನುಡಿದಟಿ | ಕಟಲೆನುಡಿದಟಿಲೆ |
| ೨೬ | ೮ | ೨ | ಘಟರೆಲೆ | ಘಟಲೆನೆ |
| ೨೬ | ೮ | ೩ | ನಿಲ್ತಲೀಯದಲ್ಲಿಂ | ನಿಲ್ತಲೀಯದಲ್ಲಿಂ |
| ೨೬ | ೮ | ೪ | ದೆಳೆದೊಯ್ವಂ ತೊಯ್ದಾತ್ಮವರನಂ | ದೆಳೆದುಯ್ವಂತು ಯ್ದಾತ್ಮವರನಂ |
| ೩೪ | ೧೦ | ೧೧ | ನಿಂದೋಡೊ ಳೊಂದಱಿಳೊಳ್ | ನಿಂದೋರೊಂದ ಱಿಳೊಳ್ |
| ೩೪ | ೧೦ | ೧೨ | ಪೋರ್ವುವು | ಪೋರ್ವುವು. |
| ೩೫ | ೧೧ | ೪ | ಪೊಗಳ್ದ | ಪೊಗಳ್ವ |
| ೪೦ | ೧೨ | ೭ | ಮವೆದೀ | ಮರೆದೀ. |
| ೪೨ | ೧೨ | ೧೪ | ಪುಕ್ಷ್ಮಂ | ಪುಷ್ಪಂ |
| ೪೨ | ೧೨ | ೧೫ | ಫಾಂದಸಂ | ಛಾಂದಸಂ |
| ೪೪ | ೧೩ | ೬ | ತ್ವರಿತ | ತ್ವರಿತ |
| ೪೫ | ೧೩ | ೧೧ | ಪೋಗಲಿತ್ತುಲ | ಪೋಗಲಿತ್ತದೆ |
| ೪೫ | ೧೩ | ೧೧ | ಮುಕ್ಕಯಂ | ಮುಕ್ಕುವಂ |
| ೪೫ | ೧೩ | ೧೪ | ಮುಗುಟ್ಟುರವಿಂಗೆ | ಮುಗುಟ್ಟುರವಿಂಗೆ |
| ೪೫ | ೧೩ | ೧೪ | ಮಿತ್ತದುಪ್ಪಪೋಲ್ | ನಿಮಿತ್ತಮುಪ್ಪಪೋಲ್ |
| ೪೬ | ೧೪ | ೨ | ದಿಪಾತವಂ | ನಿಪಾತಮಂ |
| ೫೧ | ೧೫ | ೧೧ | ಧ್ವನಿಜನ | ಧನ್ವಿಜನ |
| ೫೪ | ೧೬ | ೬ | ಪದತಾದಿಯೊಳೊಂದಿ | ಪದದಾದಿಯೊಳೊಂದಿ |
| ೫೪ | ೧೬ | ೮ | ಮುಪ್ಪುದಕ್ಕುಂ | ಮುಪ್ಪುದದಕ್ಕುಂ |
| ೫೫ | ೧೬ | ೯ | ಪಗನ್ನಡಂಬು | ಪಳಗನ್ನಡಂ |

